ಖಾಸಗೀ ಪ್ರಚಾರಕ್ಕಾಗಿ


# ಮಾ ನ ವಿ

ಸಂಪುಟ : 1 ಸಂಚಿಕೆ : 4

ಸೆಪ್ಟೆಂಬರ್—ಅಕ್ಟೋಬರ್ 1986

**ಸಂಪಾದಕೀಯ ಮಂಡಳಿ**

ಜಿ. ಕೆ. ಸಾವಿತ್ರಿ, ಎಚ್. ಎಸ್. ಚಂಪಾವತಿ,
ಎಚ್. ಎಸ್, ರಾಜೇಶ್ವರಿ, ವೇದವತಿ

**ಸಲಹೆ—ಸಹಕಾರ**

ವಿಜಯಾ

**ವಿಳಾಸ : "ಮಾನವಿ"**

ನಂ. 645/2– ಎಲ್, ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯರಸ್ತೆ,
ಮಾರುತಿ ಸೇವಾನಗರ ಅಂಚೆ
ಬೆಂಗಳೂರು–560 033.

**ಸೂಚನೆ : ವಾರ್ಷಿಕ ಚಂದಾ : 15 ರೂ.**

ಆಜೀವ ಚಂದಾ : 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಏಳು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್. ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ..................**



ಮುಖಪುಟ : ಮಕಾಳಿ



# ಸಂಪಾದಕೀಯ

1975 ರಿಂದ ಅಂತರರಾಷ್ಟ್ರೀಯ ಮಹಿಳಾ ದಿನ- ಮಾರ್ಚ್ 8ನ್ನು ತುಂಬು ಸಡಗರ ಸಂಭ್ರಮ ಹಾಗೂ ತೀವ್ರತೆಗಳಿಂದ ಆಚರಿಸುತ್ತಿರುವ ಭಾರತದ ಮಹಿಳಾ ಚಳವಳಿ ಇಂದು ಹನ್ನೆರಡನೇ ವರ್ಷಕ್ಕೆ ಕಾಲಿಟ್ಟಿದೆ. ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ಮೂವತ್ತು ಹಾಗೂ ಐವತ್ತರದಶಕದ ಮಹಿಳಾ ಚಳವಳಿಗಳು ಮುಗಿದ ಸಂದರ್ಭದಲ್ಲಿ– ಎಪ್ಪತ್ತರ ಮಧ್ಯೆ ದಶಕ ಭಾರತದ ಮೂರನೇ ಹಂತದ ಮಹಿಳಾ ಚಳವಳಿಯ ಸ್ಫೂರ್ತಿಯನ್ನು ತುರ್ತು ಪರಿಸ್ಥಿತಿಯ ರಾಜಕೀಯ ನೆಲೆಯಲ್ಲಿ ಹುಟ್ಟು ಹಾಕಿತು. ಭಾರತೀಯ ಕಮ್ಯುನಿಸ್ಟ್ ಪಕ್ಷಗಳಂತಹ ರಾಜಕೀಯ ಪಕ್ಷಗಳ ಅನುಭವಗಳಿಂದ ಈಚೆ ಬಂದ ನೆಲೆಯಿಂದ ಹಾಗೂ ವೈಯಕ್ತಿಕ ನೆಲೆಗಳಿಂದ ಪ್ರಾರಂಭವಾದ ಭಾರತದ ಸ್ವಾಯತ್ತ (Autonomous) ಮಹಿಳಾ ಚಳವಳಿಯ ಒಂದು ದಶಕದ ಸಾಧನೆಗಳು ಹಲವಾರು. ಯಾವುದೇ ರಾಜಕೀಯ ಪಕ್ಷ ಹಾಗೂ ಗುಂಪುಗಳಿಂದ ಪ್ರತ್ಯೇಕವಾದ ಸ್ವತಂತ್ರ ಅಸ್ತಿತ್ವ ಎಂದು ಸ್ವಾಯತ್ತತೆಯನ್ನು ವ್ಯಾಖ್ಯಾನಿಸಿದ ಮಹಿಳಾ ವೇದಿಕೆಗಳು, ಸ್ವತಂತ್ರವಾಗಿ ಕೆಲಸ ಮಾಡುತ್ತಲೇ ಪ್ರಗತಿ ಪರ ಪಕ್ಷ ಗುಂಪುಗಳ ಜೊತೆ ಸಂವಾದ ನಡೆಸುವ ಹಾಗೂ ಕೆಲವು ಸಾಮಾನ್ಯ ಸಮಸ್ಯೆಗಳಲ್ಲಿ ಒಟ್ಟಾಗಿ ಹೋರಾಡುವಂತಹ ದೃಷ್ಟಿಕೋನದಿಂದಲೇ ಈ ಹತ್ತು ವರುಷಗಳಲ್ಲಿ ಕೆಲಸ ಮಾಡಿವೆ. ರಾಜಕೀಯ ಪಕ್ಷಗಳ ಶ್ರೇಣೀಕೃತ (hierarchical) ವ್ಯವಸ್ಥೆಯನ್ನು ವಿರೋಧಿಸಿ, ಒಟ್ಟಾಗಿ ಕೆಲಸ ಮಾಡುವ (collective functioning), ಜವಾಬ್ದಾರಿ ಹಂಚಿಕೊಳ್ಳುವಂತಹ (division of responsibility) ಹಾಗೂ ಒಟ್ಟಾಗಿ ನಿರ್ಧರಿಸುವಂತಹ (collective decision) ಕೆಲವು ಪರಿಕಲ್ಪನೆಗಳನ್ನು ಈ ವ್ಯವಸ್ಥೆಯಲ್ಲಿ ಮಹಿಳಾ ಚಳವಳಿ ಹುಟ್ಟು ಹಾಕಿದೆ.

ವೈಯಕ್ತಿಕವೆಂದು ಪರಿಗಣಿತವಾದ ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆಯಂತಹ ಸಮಸ್ಯೆಗಳ ಸಾಮಾಜಿಕ ಸ್ವರೂಪವನ್ನು ಸಾರ್ವಜನಿಕ ಗಮನಕ್ಕೆ ತರುವುದಷ್ಟೇ ಅಲ್ಲದೇ ಕಾರ್ಮಿಕ ಹಾಗೂ ರೈತ ಮಹಿಳೆಯರ ವೇತನ ಹಾಗೂ ಮೂಲೆಗುಂಪಾಗುತ್ತಿರುವ ಅವರ ಸ್ಥಿತಿಯ ಬಗ್ಗೆ ಸಾರ್ವಜನಿಕ ಪ್ರಜ್ಞೆ ಮೂಡಿಸುವಲ್ಲಿ ಮಹಿಳಾ ಗುಂಪುಗಳು ಯಶಸ್ವಿಯಾಗಿವೆ.

ಜೊತೆಗೆ ಈ ಹತ್ತು ವರುಷದ ಮಹಿಳಾ ಚಳವಳಿಯ ಅನುಭವ– ಈ ಚಳವಳಿಯ ಭವಿಷ್ಯತ್ತಿನ ದಿಕ್ಕಿಗೆ ಅಗತ್ಯವಾಗಿ ಬೇಕಾದ ಆರ್ಥಿಕ ಹಾಗೂ ರಾಜಕೀಯ ದೃಷ್ಟಿಕೋನವನ್ನು ರೂಪಿಸಬೇಕಾದ ಅಗತ್ಯವನ್ನು ಸಹ ಈಗ ಹುಟ್ಟು ಹಾಕಿದೆ.

ಒಂದು ದಶಕದ ಪ್ರಾರಂಭದ ಉತ್ಸಾಹ ಗೊಂದಲಗಳನ್ನು ಮೀರಿ ಇಂದು ಹೆಚ್ಚು ವ್ಯವಸ್ಥಿತ ವಾಗಿ, ಸ್ಪಷ್ಟ ಪರಿಕಲ್ಪನೆಗಳೊಂದಿಗೆ ಕೆಲಸ ಮಾಡುವುದನ್ನು ಭಾರತದ ಮಹಿಳಾ ಚಳವಳಿ ಇಂದು ನಮ್ಮೆಲ್ಲರಿಂದ ಅಪೇಕ್ಷಿಸುತ್ತದೆ.

ಸಾರ್ವಜನಿಕ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರ ಜೊತೆಗಿನ ಸಂಬಂಧ, ಸಂಪರ್ಕಗಳನ್ನು ಮಹಿಳಾ ಚಳವಳಿ ಅಭಿವೃದ್ಧಿ ಪಡಿಸಿಕೊಳ್ಳಬೇಕಾಗಿದೆ. ದುಡಿಯುವ ವರ್ಗದ ಕಾರ್ಮಿಕ ಹಾಗೂ ರೈತ ಮಹಿಳೆಯರ ಜೊತೆ ಹೇಗೆ ಮತ್ತು ಯಾವ ಹಂತಗಳಲ್ಲಿ ಹೋರಾಟದ ಯೋಜನೆಗಳನ್ನು ರೂಪಿಸಿ ಕೊಳ್ಳಬೇಕು ಎಂಬುವನ್ನು ಇಂದು ಗಂಭೀರವಾಗಿ ಆಲೋಚಿಸಬೇಕಾಗಿದೆ. ಏಕೆಂದರೆ ಬೆಳೆಯುತ್ತಿರುವ ಜಗತ್ತಿನ ಆರ್ಥಿಕ ಕ್ರೈಸಿಸ್‌ನಲ್ಲಿ ಮೂರನೇ ಜಗತ್ತಿನ ಮಹಿಳೆಯರ ಕಷ್ಟ-ಸಂಕೋಲೆಗಳು ಹೆಚ್ಚಾಗುವ ಸಂದರ್ಭ ಕಂಡು ಬರುತ್ತದೆ. ದುಡಿಯುವ ಎಲ್ಲಾ ಕ್ಷೇತ್ರಗಳಲ್ಲು ಮಹಿಳೆಯರ ಬದುಕು ಇನ್ನೂ ದುಸ್ತರ ಸ್ಥಿತಿಗೆ ಇಳಿಯುವಂತಹ ಸೂಚನೆಗಳು ಕಂಡು ಬರುತ್ತಿವೆ.

ಆಮದು-ರಫ್ತು ಕುರಿತಾದ ಮೂರನೇ ಜಗತ್ತಿನ ರಾಷ್ಟ್ರಗಳ ಸ್ವತಂತ್ರ್ಯ ಆರ್ಥಿಕ ನೀತಿಗಳು ದುಡಿಯುವ ವರ್ಗದ ಮಹಿಳೆಯರ ಮೇಲೆ ಹೆಚ್ಚು ಋಣಾತ್ಮಕವಾದಂತಹ ಪರಿಣಾಮವನ್ನು ಬೀರುತ್ತಿವೆ. ಉದಾಹರಣೆಗೆ ರಫ್ತು ಪ್ರಾಮುಖ್ಯ ಉಳ್ಳ ಉಡುಪು ಕಾರ್ಖಾನೆ, ಫಾರ್ಮ ಚುಟಿಕಲ್ಸ್, ಬಟ್ಟೆ ಕಾರ್ಖಾನೆ ಗಳಲ್ಲಿ ಹೆಚ್ಚಾಗುತ್ತಿರುವ ಹೋಂ ಇಂಡಸ್ಟ್ರೀಗಳು ಮತ್ತು ಹೆಚ್ಚಾಗುತ್ತಿರುವ ಸ್ವತಂತ್ರ್ಯ ವ್ಯವಹಾರ ಪ್ರದೇಶಗಳು (Free trade zones) ಇಂತಹವುಗಳಲ್ಲಿ ಕಾರ್ಮಿಕ ಮಹಿಳೆಯರ ಸ್ಥಿತಿಗಳು ದಿನೇ ದಿನೇ ದುರ್ಬಲಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಜೊತೆಗೆ ಸ್ವತಂತ್ರ ಆರ್ಥಿಕ ನೀತಿಗಳು ಹಳ್ಳಿಗಾಡಿನ ರೈತ ಮಹಿಳೆಯರನ್ನು ಇನ್ನೂ ದುರ್ಬಲಗೊಳಿಸುತ್ತಿರುವುದಲ್ಲದೇ, ಅತ್ಯಂತ ಹೀನ ಸ್ಥಿತಿಗೆ ತಳ್ಳುತ್ತಿವೆ.

ಜಾಗತಿಕ ಆರ್ಥಿಕ ಕ್ರೈಸಿಸ್‌ನಲ್ಲಿ - ಮೂರನೇ ಜಗತ್ತಿನ ಮಹಿಳೆಯರು ಕಡಿಮೆ ವೇತನದ, ಸುಲಭ ವಾಗಿ ದಕ್ಕುವಂತಹ ಹಾಗೂ ಸುಲಭವಾಗಿ ಹೊರದೂಡಬಲ್ಲಂತಹ ವಿಧೇಯ ಶ್ರಮ ಶಕ್ತಿಯಾಗಿ ಕಾಣಿಸಿ ಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಭಾರತದ ಮಹಿಳಾ ಚಳವಳಿ ತನ್ನ ಜವಾಬ್ದಾರಿಯನ್ನು ಗುರುತಿಸ ಬೇಕಾಗಿದೆ,

ಇಂತಹ ಸಂದರ್ಭ ಮಹಿಳಾ ಚಳವಳಿ ವಿರೋಧಾಭಾಸಗಳನ್ನು ಹುಟ್ಟು ಹಾಕಬಹುದು. ಹೀಗಿದ್ದಾಗ ಮಹಿಳಾ ಚಳವಳಿ ವ್ಯವಸ್ಥೆಯ ಜೊತೆಗೆ ಸಾಮ್ಯ ಸಾಧಿಸಿ ಬಿಡುತ್ತದೆಯೇ ಅಥವಾ ಅದರ ಸ್ವಾಯತ್ತತೆ - ಉಳಿಸಿಕೊಳ್ಳುತ್ತದೆಯೋ ಎಂಬುದು ಒಟ್ಟಾಗಿ ಮಹಿಳಾ ಸ್ವಾತಂತ್ರ್ಯವಾದಿಗಳ ಬದ್ಧತೆ ಯನ್ನು ಪರೀಕ್ಷಿಸುವಂತಹ ಸಂದರ್ಭ ಇದಾಗಿದೆ.

ನೀರಾದೇಸಾಯಿ ಹಾಗೂ ವಿಭೂತಿ ಪಟೇಲ್ ಹೇಳುವ ಹಾಗೆ (Indian women 1985)

–ಒಟ್ಟು ಜಗತ್ತಿನ ಈ ಆರ್ಥಿಕ ಕ್ರೈಸಿಸ್‌ನಲ್ಲಿ ಈಗ ಭಾರತದ ಮಹಿಳಾ ಚಳವಳಿಯ ನಿಲುವು ತೀರಾ ಸವಾಲು ಹಾಕುವಂತಹದಾಗಿದೆ. ಯಾವುದೇ ಆರ್ಥಿಕ ಸಹಾಯ ಹಾಗೂ ಬೆಂಬಲಗಳು ಸುಲಭವಾಗಿ ಸಿಗಲಾರದೇ ಹೋಗಬಹುದಾದ ಸಂದರ್ಭಗಳಲ್ಲಿ ಮಹಿಳಾ ಸಂಸ್ಥೆಗಳು ಕೆಲಸ ಮಾಡಬೇಕಾಗುತ್ತದೆ.

ಹೀಗೆ ಜಾಗತಿಕ ಆರ್ಥಿಕ ಕ್ರೈಸಿಸ್‌ನ ಹಿನ್ನಲೆಯಲ್ಲಿಯೇ 'ಮಾನವಿ'ಗೆ ಸ್ವಾವಲಂಬನೆಯ ಅಗತ್ಯ ಇದೆ ಎಂದು ನಮಗೆ ಅನ್ನಿಸಿದೆ. 'ಮಾನವಿ'ಯಿಂದ ಇತ್ತೀಚೆಗೆ ನಾವು ತಂದ ಮಹಿಳಾ ಚಿತ್ರ ಉಳ್ಳ ಕ್ಯಾಲೆಂಡರ್‌ಗಳು ಈ ಯೋಜನೆಯಲ್ಲಿಯೇ ಸ್ಫೂರ್ತಿ ಪಡೆದಂತಹವುಗಳು. 'ಮಾನವಿ' ಬಳಗದವರು ಹಗಲು-ರಾತ್ರಿ ಸ್ಕ್ರೀನ್ ಪ್ರಿಂಟಿಂಗ್ ಕಲಿತು ಹಾಗೂ ಕ್ಯಾಲೆಂಡರ್‌ಗಳನ್ನು ತಯಾರಿಸಿದುದು - ಈ ಎಲ್ಲಾ ಯೋಜನೆಗಳ ಉತ್ಸಾಹದಲ್ಲಿ ಮೂಡಿ ಬಂದ ಮೊದಲ ಅನುಭವ.

ಹಾಗೆಯೇ 'ಮಾನವಿ'ಯ ಮುದ್ರಣವನ್ನು 'ಮಾನವಿ'ಯ ಪ್ರಕಾಶನದಿಂದಲೇ ಮಾಡುವಂತಹ ಯೋಜನೆಯೊಂದನ್ನು 'ಮಾನವಿ' ಬಳಗ ಹಾಕಿಕೊಳ್ಳುತ್ತಿದೆ. ಮೇ ಸಂಚಿಕೆಯನ್ನು 'ಮಾನವಿ'ಯ ಅಚ್ಚು ಮೊಳೆಗಳ ಕೇಂದ್ರ ಹಾಗೂ ಮುದ್ರಣ ಯಂತ್ರದ ವೆಚ್ಚವನ್ನು ಭರಿಸುವುದಕ್ಕೆಂದೇ ಯೋಚಿಸುತ್ತಿದ್ದೇವೆ. ಈ ಯೋಜನೆ 'ಮಾನವಿ'ಯ ದ್ವೈಮಾಸಿಕ ಸಂಚಿಕೆ ಪ್ರಕಟಿಸುವುದಕ್ಕೆ ಸಹಾಯ ಮಾಡುವುದರೊಂದಿಗೆ, ವರದಕ್ಷಿಣೆ, ವಿವಾಹ ವಿಚ್ಛೇದನಾ ಹಾಗೂ ಬಡತನ ರೇಖೆಯ ಕೆಳಗೆ ಬದುಕಿ ನರಳುತ್ತಿರುವ ಅನೇಕ ಮಹಿಳೆಯರಿಗೆ ಕಂಪೋಸಿಂಗ್ ಹಾಗೂ ಪ್ರಿಂಟಿಂಗ್ ತರಬೇತಿ ನೀಡುವುದಕ್ಕೂ ಸಹಾಯವಾಗುತ್ತದೆ. ಈ ಮಹಿಳೆಯರಿಗೆ ಅಲ್ಪ ಮಟ್ಟಿಗೆ ಆರ್ಥಿಕ ಸ್ವಾವಲಂಬನೆಗಳೊಡನೆ, ಉದ್ಯೋಗದ ಅವಕಾಶಗಳನ್ನು ಶ್ರಮ ಮಾರು ಕಟ್ಟೆಯಲ್ಲಿ ಒದಗಿಸಿಕೊಡುವುದೂ ನಮ್ಮ ಉದ್ದೇಶವಾಗಿದೆ. ಜಗತ್ತಿನ ಆರ್ಥಿಕ ಕ್ರೈಸಿಸ್‌ನ ಸವಾಲುಗಳನ್ನು ಎದುರಿಸುವಲ್ಲಿ ಹಾಗೂ ಮಹಿಳಾ ಚಳವಳಿಯ ಸ್ವಾಯತತ್ತೆ ಕಾಯ್ದುಕೊಳ್ಳುವಲ್ಲಿ ಈ ಪ್ರಯತ್ನ ಸಣ್ಣ ಹೆಜ್ಜೆ ಎಂದು ನಾವು ಆಶಿಸುತ್ತೇವೆ. ಹಾಗೂ ಅಗತ್ಯ ಎಂದು ನಾವು ತಿಳಿಯುತ್ತೇವೆ, ಮತ್ತು ನಿಮ್ಮಿಂದ ಸಲಹೆ, ಸಹಕಾರಗಳನ್ನು ನಿರೀಕ್ಷಿಸುತ್ತೇವೆ.

–ಸಂಪಾದಕೀಯ ಮಂಡಳಿ



# ಉಷಾ : ಕ್ರೀಡಾಕ್ಷೇತ್ರದಲ್ಲೊಂದು ಕಿರಣ

ಜಿ. ಕೆ. ಸಾವಿತ್ರಿ

ಕಣ್ಣಾನೂರು–ಕಲ್ಲಿಕೋಟೆಯ ಮಧ್ಯೆಯಿರುವ "ಬಡಗರ" ಊರಿನ 'ಪಯ್ಯೋಳಿ' ಎಂಬ ಕೇರಳೀಯ ಸಂಸ್ಕೃತಿಯ ಒಂದು ಪ್ರಾಂತದಲ್ಲಿ, ಒಬ್ಬ ಬಟ್ಟೆ ವ್ಯಾಪಾರಿಯ ಮನೆಯಲ್ಲಿ ಹುಟ್ಟುವ ಒಬ್ಬ ಹೆಣ್ಣು, ಇಡೀ ಏಷ್ಯಾ ಖಂಡದಲ್ಲೇ ಓಟದ ನಾಯಕಿಯಾಗುವಳೆಂಬುದನ್ನು, ಭಾರತೀಯ ಕ್ರೀಡಾರಂಗದ ಕತ್ತಲನ್ನಟ್ಟುವ ಪ್ರದೀಪವಾಗುವಳೆಂಬುದನ್ನು, ಸ್ತ್ರೀಕುಲಕ್ಕೇ ಒಬ್ಬ ಹೆಮ್ಮೆಯ ವ್ಯಕ್ತಿಯಾಗುವಳೆಂಬುದನ್ನು.... ಬಹುಷಃ ಯ್ಯಾರೊಬ್ಬರೂ ಕನಸು ಕಂಡಿರಲಿಕ್ಕಿಲ್ಲ.

"ಪಯ್ಯೋಳಿ" ಗ್ರಾಮದಲ್ಲಿ "ಪ್ರದೀಪ ನಿಲಯಂ" ಉಷಾಳ ನಿವಾಸ. ಮೂಲತಃ ಬಡ ಕುಟುಂಬವಾದ ಉಷಾಳ ಮನೆತನದ ವೃತ್ತಿ ಬಟ್ಟೆ ನೇಯ್ಗೆ ಮತ್ತು ಬಟ್ಟೆ ವ್ಯಾಪಾರ. ಉಷಾಳ ತಂದೆ ಪಿ. ಎಂ. ಪೈತಲ್. ಈಗ ಪಯ್ಯೋಳಿಯಲ್ಲಿ ಜವಳಿ ಅಂಗಡಿಯನ್ನಿಟ್ಟಿದ್ದು, ತನ್ನ ಪತ್ನಿ ಲಕ್ಷ್ಮಿ ಮತ್ತು ಐದು ಹೆಣ್ಣು ಮಕ್ಕಳು ಮತ್ತು ಒಬ್ಬ ಮಗ – ಇಷ್ಟು ಜನರಿರುವ ಕುಟುಂಬವನ್ನು ಪೋಷಿಸುತ್ತಿದ್ದಾರೆ. ಈಗ ಉಷಾಳ ಇಬ್ಬರು ಸಹೋದರಿಯರಿಗೆ ಮದುವೆಯಾಗಿದೆ.

ಬಡ ಕುಟುಂಬಿಗಳಾದರೂ, ಉಷಾಳ ತಂದೆ ತಾಯ್ಗಳು–ಅವಳ ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹವಿತ್ತು, ಅವಳ ಕ್ರೀಡಾ ಬದುಕಿನ ವಿಕಸನಕ್ಕೆ ನಾಂದಿಹಾಡಿ ಕೃತಕೃತ್ಯರಾದವರು.

ಹೇಳಬೇಕೆಂದರೆ, ಈಗ ಅಂಥಾ ಸಾಧನ ಪ್ರೇಮಿಯ ಪ್ರತಿಭಾವಂತೆಯ ಮನೆ ಮಾತ್ರ "ಪ್ರದೀಪ ನಿಲಯ"– ಅಲ್ಲ ; ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ದೀರ್ಘಕಾಲದ ನಿರಂತರ ಸೋಲಿನ ಹೊಡೆತ ತಿಂದು, ಅಪಮಾನ, ಜಿಗುಪ್ಸೆ, ನಿರಾಶೆ – ನೋವುಗಳ ನೆಲೆವೀಡಾಗಿದ್ದ ಭಾರತೀಯ ಕ್ರೀಡಾರಂಗ ಇದೀಗ "ಪ್ರದೀಪ ನಿಲಯ".

.........ಹೀಗೆ ಇಡೀ ಭಾರತವನ್ನೇ ಪ್ರದೀಪ ನಿಲಯವನ್ನಾಗಿಸಿದ, ಅಂತರ್‍ರಾಷ್ಟ್ರೀಯ ಮಟ್ಟದ ಕ್ರೀಡೆಯಲ್ಲಿ ಚಿನ್ನದ ಜೊತೆಗೆ "ಫ್ಲೈಯಿಂಗ್ ಕೇರ್ ಲೈಟ್", "ಓಟದ ರಾಣಿ". "ಚಿನ್ನದ ಹುಡುಗಿ", "ಇಂಡಿಯನ್ ಟ್ರಾಕ್ ಸ್ಟಾರ್"..... ಏನೆಲ್ಲಾ ಬಿರುದುಗಳನ್ನು ಪಡೆದ 'ಪಿಲವುಳಕಂಡಿ ತೆಕ್ಕಪಿರಂಬಿಲ್ ಉಷಾ", ಭಾರತೀಯ ಸಂಪ್ರದಾಯಕ್ಕೆ – ಮೂಢನಂಬಿಕೆ, ಆಚಾರಗಳ ಕತ್ತಲ ಬಿರುಕಿಗೆ, ತನ್ಮೂಲಕ ನಿಷ್ಪ್ರಯೋಜಕತೆಗೆ, ಯಾವೊಂದು ಕೆಲಸಕ್ಕೂ ಬಾರದಂತೆ , ಭಾರತೀಯ ಹೆಣ್ಣನ್ನು ತಳ್ಳಿ ಅಸಂಖ್ಯಾತ ದುರಂತ ಬದುಕುಗಳನ್ನು ಸೃಷ್ಟಿಸಿದ ಭಾರತೀಯ ಸಂಪ್ರದಾಯಕ್ಕೆ, "ಭಾರತೀಯ ಹೆಣ್ಣೂ ಸಾಧಿಸಬಲ್ಲಳು; ಇಡೀ ದೇಶದ, ಖಂಡದ ಹೆಮ್ಮೆಯಾಗಿ, ಹಿರಿಮೆಯಾಗಿ ನಿಲ್ಲಬಲ್ಲಳು"– ಎಂಬುದನ್ನು ತೋರಿಸಿದವಳು.

ಮಹತ್ಸಾಧನೆಯತ್ತ ನಿಷ್ಠೆಯಿಂದ ಧಾವಿಸಬಲ್ಲ ಅರ್ಪಣಾ ಮನೋಭಾವದ ಛಲಪೂರ್ಣ ಆಟಗಾರರ ಅಭಾವದಿಂದ ಕಳಾಹೀನವಾಗಿದ್ದ ಕ್ರೀಡಾರಂಗಕ್ಕೆ ಉಷೆಯಂತೆ ಬಂದ ಉಷಾ, ಕ್ರೀಡಾರಂಗದ ಅಚ್ಚುಮೆಚ್ಚಿನ ನಾಯಕಿಯಾಗಿ, ಕ್ರೀಡಾ ಪ್ರೇಮಿಗಳ ಅಕ್ಕರೆಯ ಗೆಳತಿಯಾಗಿ, ಕ್ರೀಡಾರಂಗದ ಭವಿಷ್ಯತ್ತಿನೆಡೆ ದೃಷ್ಟಿಚಾಚಿದ ಆಶಾವಾದದ ಕಣ್ಗಳಲ್ಲಿ ಭರವಸೆಯ ಹೊಳಪಾಗಿ ನಿಂತ ಉಷಾ, ಭಾರತೀಯ ಕ್ರೀಡಾರಂಗಕ್ಕೆ ಒಂದು ಅಮೂಲ್ಯ ಕಾಣಿಕೆ. ಇಂಥ ಅಮೂಲ್ಯ ಕಾಣಿಕೆಯನ್ನು ಕ್ರೀಡಾರಂಗಕ್ಕೆ ನೀಡಿದ ಯಶಸ್ಸು, ಪ್ರಾಥಮಿಕ ಹಂತದಿಂದಲೇ ಅವಳ ಕ್ರೀಡಾಚೇತನವನ್ನು ಪೋಷಿಸಿದವರಿಗೆ ಸೇರುತ್ತದೆ.

---

ಮಹತ್ಸಾಧನೆಯತ್ತ ನಿಷ್ಠೆಯಿಂದ ಧಾವಿಸಬಲ್ಲ ಅರ್ಪಣಾ ಮನೋಭಾವದ ಛಲಪೂರ್ಣ ಆಟಗಾರರ ಅಭಾವದಿಂದ ಕಳಾಹೀನವಾಗಿದ್ದ ಕ್ರೀಡಾರಂಗಕ್ಕೆ ಉಷೆಯಂತೆ ಬಂದ ಉಷಾ, ಅಸಾಧಾರಣ ಸಾಧನೆಗೊಂದು ಸಂಕೇತವಾಗಿದ್ದಾಳೆ.

---

ಪಿ. ಟಿ. ಉಷಾಳ ಕ್ರೀಡಾ ಪ್ರತಿಭೆಯನ್ನು ಅವಳ ಬಾಲ್ಯದಲ್ಲಿಯೇ ಗುರ್ತಿಸಿ, ಅವಳ ಉನ್ನತಿಗೆ ಶ್ರಮಿಸಿದ ಕೀರ್ತಿ ಬಾಲಕೃಷ್ಣನಾಯರ್‌ಗೆ ಸೇರುತ್ತದೆಂದು ಪಯ್ಯೋಳಿಯ ಜನರ ಅಭಿಪ್ರಾಯ.

ಪಿ. ಟಿ. ಉಷಾಳಿಗೆ, ಅವಳ ಪ್ರಾಥಮಿಕ ವಿದ್ಯಾಭ್ಯಾಸದ ಸಮಯದಲ್ಲೇ, ಬಾಲಕೃಷ್ಣನಾಯರ್‌ರವರಿಂದ ಶಾರೀರಿಕ ಶಿಕ್ಷಣ ದೊರೆಯಿತು. ಉಷಾ ಏಳನೇ ತರಗತಿವರೆಗೂ ಓದಿದ ಪಯ್ಯೋಳಿಯ ಶಾಲೆಯಲ್ಲಿ ನಾಯರ್ ಶಾರೀರಿಕ ಶಿಕ್ಷಕ. ಅವಳ ಕ್ರೀಡಾ ಪ್ರತಿಭೆಯನ್ನು ಗುರ್ತಿಸಿ ಅವಳನ್ನು ಕಣ್ಣಾನೂರು ಕ್ರೀಡಾಶಾಲೆಗೆ ಕಳುಹಿಸಲು ಶಿಫಾರಸು ನಡೆಸಿದರು, ಬಾಲಕೃಷ್ಣನಾಯರ್. ಉಷಾ ಕಣ್ಣಾನೂರು ಕ್ರೀಡಾಶಾಲೆಗೆ ಬಂದ ಮೇಲೆ ಉತ್ತಮ ತರಬೇತಿ ನೀಡಿದ ಕೀರ್ತಿ ಓ. ಎಂ. ನಂಬಿಯಾರ್‌ರವರಿಗೆ ಸೇರುತ್ತದೆ.

ತಾನೂ ಎಲ್ಲರಂತೆಯೇ, ನಂಬಿಯಾರ್‌ರಿಂದ ಸಾಮಾನ್ಯ ಶಿಕ್ಷಣ ಪಡೆಯುತ್ತಿದ್ದ ಉಷಾ, ತನ್ನ ಕೋಚ್‌ನ ಕಣ್ಣು ತೆರೆಸಿದ್ದು, ಕಿವಲಾನ್ ಅಂತರ ರಾಷ್ಟ್ರೀಯ ಸ್ಪರ್ಧೆಯಲ್ಲಿ. ಆಗಿನ್ನೂ 14 ವರ್ಷದವಳಾದ ಉಷಾ100 ಮೀ. ಓಟವನ್ನು 13. 0 ಸೆಕೆಂಡಿನಲ್ಲಿ ಓಡಿ ಮುಗಿಸಿದ್ದರು. ಅಂದೇ ಯೋಚಿಸಿದರು ನಂಬಿಯಾರ್—ಉಷಾಳನ್ನು ಅಂತರಾಷ್ಟ್ರೀಯ ಮಟ್ಟದ ಓಟಗಾರ್ತಿಯನ್ನಾಗಿ ರೂಪಿಸಬಹುದೆಂದು.

ದೆಹಲಿಯ ಏಷ್ಯಾಡ್‌ನಲ್ಲಿ ಉಷಾ, ಲಿಡಿಯಾ ಡಿ. ವೇಗಾಳಿಂದ ಸೋಲನುಭವಿಸಿದಾಗ ಚಿಂತಿತರಾದ ನಂಬಿಯಾರ್, ಉಷಾಳ ತರಬೇತಿಯ ಕಡೆ ವಿಶೇಷ ಶ್ರದ್ಧೆ ವಹಿಸಿದರು. ತನ್ನ ಕೋಚಿಂಗ್ ವಿಧಾನದ ಮೊದಲುಗೊಂಡು ಆಕೆ ಯಾವ ರೀತಿಯ ಆಹಾರ ತೆಗೆದುಕೊಳ್ಳಬೇಕು – ಯಾವ ಸ್ಪರ್ಧೆಯಲ್ಲಿ ಯಾವ ದಿನ ಭಾಗವಹಿಸಬೇಕು – ಹರ್ಡಲ್ಸ್‌ನಲ್ಲಿ ನಯವಾದ ಚಲನೆಯಲ್ಲೇ ಓಡುವ ಬಗೆ ಹೇಗೆ – ಹಾರುವ ಬಗೆ ಹೇಗೆ– ವಿಶ್ವದಾಖಲೆ ಸ್ಥಾಪಿಸಿದಇತರರು ಹರ್ಡಲ್ಸ್‌ಆಡುವರೀತಿ ಹೀಗೆ, ತಮ್ಮ ಕೋಚಿಂಗ್‌ನಲ್ಲಿ ಎಲ್ಲಾ ತಂತ್ರಗಳನ್ನೂ ಅಳವಡಿಸಿ, ಉಷಾ ಒಲಿಂಪಿಕ್ಸ್‌ನಲ್ಲಿ ಚಿನ್ನ ತರುವುದನ್ನೇ ಕನಸು ಕಂಡವರು ; ಉಷಾಳ ಕ್ರೀಡಾ ಚೇತನದ ಬೆಳವಣಿಗೆಗೆ ಪೋಷಕರಾದವರು.

ನಂಬಿಯಾರ್ ಈಗ ತಮ್ಮ ಸರ್ಕಾರೀ ಸೇವೆಗೂ ರಾಜೀನಾಮೆ ನೀಡಿ ಸಂಪೂರ್ಣ ಉಷಾಳ ತರಬೇತಿಯ ಕಡೆಗೇ ಗಮನ ನೀಡಿದ್ದಾರೆ.

ನಂಬಿಯಾರ್ ತಮ್ಮ ಶಿಕ್ಷಣ ಸಾಮರ್ಥ್ಯವನ್ನೆಲ್ಲಾ ಉಷಾಳ ತರಬೇತಿಯೆಡೆ ಹರಿಸಿದರೂ, ಹಲವರಿಂದ, ಹಲವಾರು ಕಾರಣಗಳಿಗಾಗಿ ಟೀಕೆಗೆ ಗುರಿಯಾಗಿದ್ದಾರೆ.

ಉಷಾ ಪ್ರತಿಯೊಂದು ಮಾತಿಗೂ, ನಿರ್ಣಯಕ್ಕೂ ನಂಬಿಯಾರ್‌ರವರನ್ನೇ ಆಶ್ರಯಿಸುತ್ತಾಳೆ. ಸಂದರ್ಶನ ಅಥವಾ ಸನ್ಮಾನ ಕಾರ್ಯಕ್ರಮಗಳೂ ನಂಬಿಯಾರ್ ಮೂಲಕವೇ ವ್ಯವಸ್ಥೆಯಾಗುತ್ತದೆ. ಉಷಾ ತನ್ನೆಲ್ಲಾ ಯಶಸ್ಸನ್ನೂ ಅವರಿಗೇ ಅರ್ಪಿಸಿದವಳು. ಉಷಾ ತನಗೆ ಬಹುಮಾನವಾಗಿ ದೊರೆತ ಎರಡು ಮೋಟಾರ್ ಬೈಕ್‌ಗಳನ್ನೂ ಅವರಿಗೇ ಸಮರ್ಪಿಸಿ ಬಿಟ್ಟಿದ್ದಾಳೆ.

ಕೇರಳದ ರಾಜ್ಯ ಸರ್ಕಾರ ಉಷಾಳಿಗೆ "ಸ್ಟಾಂಡರ್ಡ್ 2000" ಕಾರು ನೀಡಿದೆ.

ಒಮ್ಮೆ ಜರ್ಮನಿಯಲ್ಲಿ ಉಷಾಳಿಗೆ ವಿಶೇಷ ಆಹ್ವಾನ ಬಂದಾಗ ನಂಬಿಯಾರ್ ಆಹ್ವಾನಿತರಾಗಿರಲಿಲ್ಲ ಎಂಬ ಕಾರಣಕ್ಕಾಗಿ ಉಷಾ ಆಹ್ವಾನವನ್ನು ನಿರಾಕರಿಸಿದ್ದರು. ಅಮೆರಿಕನ್ ಒಲಿಂಪಿಕ್ ಸ್ವರ್ಣವಿಜೇತರೋರ್ವರು ಉಷಾಳಿಗೆ ವಿಶೇಷ ತರಬೇತಿ ನೀಡುವುದಾಗಿ ಆಹ್ವಾನವಿತ್ತಾಗ ನಂಬಿಯಾರ್ ಒಪ್ಪಲಿಲ್ಲ. ಸಿಯೋಲ್‌ನ ಏಷ್ಯಾಡ್‌ನಲ್ಲಿ 100. ಮೀ. ನಲ್ಲಿ ಚಿನ್ನವನ್ನು ಗೆದ್ದಿದ್ದ ಫಿಲಿಫೈನ್ಸ್‌ನ ಓಟಗಾತಿ ಲಿಡಿಯಾ. ಡಿ. ವೇಗಾ, ಈ ಮಾಜಿ ಆಟಗಾರನಿಂದಲೇ ತರಬೇತಿ ಪಡೆದಿದ್ದುದು.

ನಂಬಿಯಾರ್ ಸ್ವಪ್ರತಿಷ್ಠೆಗಾಗಿ ಉಷಾಳನ್ನು ಕಳುಹಿಸದಿದ್ದುದೇ ಎಂಬ ಗುಮಾನಿ ಅನೇಕರಲ್ಲಿದೆ.

ಈ ಕಾರಣಕ್ಕಾಗಿಯೇ ನಂಬಿಯಾರ್, ಉಷಾಳ ಎಲ್ಲಾ ಚಟುವಟಿಕೆ – ಕಾರ್ಯಕಲಾಪಗಳ ನಿಯಂತ್ರಕ– ಆಕೆಯ ಎಲ್ಲಾ ಸಾಧನೆಗಳಲ್ಲೂ ನಿರ್ಣಾಯಕ ಪಾತ್ರ ವಹಿಸುವಾತ. ಆತ ತನ್ನ ಸರ್ಕಾರೀ ಸೇವೆಗೂ ರಾಜೀನಾಮೆ ನೀಡಿ, ಉಷಾಳ ತರಬೇತಿಯತ್ತ ತನ್ನನ್ನು ಸಂಪೂರ್ಣ ಕೇಂದ್ರೀಕರಿಸಿಕೊಂಡಿದ್ದರೂ, ಉಷಾ ತನ್ನ ಸಾಧನೆ, ಯಶಸ್ಸು, ಗಳಿಕೆಯ ಖುಶಿ, ಶ್ರೇಯೋಹಾದಿಯಲ್ಲಿನ ಪ್ರತಿಹೆಜ್ಜೆಯ ಅನ್ವೇಶಣೆ... ಸರ್ವಸ್ವವನೂ ನಂಬಿಯಾರ್‌ರಲ್ಲೇ ಸಮರ್ಪಿಸಿಬಿಟ್ಟಿದ್ದಾಳೆ ! – ಆದ್ದರಿಂದ ನಿಯಂತ್ರಕ, ಪೋಷಕ, ಮಾರ್ಗದರ್ಶಕ, ಸೂತ್ರಧಾರಕ– ಅವಳ ಪಾಲಿಗೆ ಎಲ್ಲವೂ ಆಗಿರುವಾಗ ಆತ

ಸಹಜವಾಗಿಯೇ ಸ್ವಪ್ರತಿಷ್ಠೆಯನ್ನು ಪ್ರಯೋಗಿಸ ಬಹುದು....... ಸೂಕ್ಷ್ಮ ಅವಕಾಶಗಳಲ್ಲಿ ಶೋಷಿಸ ಬಹುದು ..ತನ್ನ ಹೆಚ್ಚುಗಾರಿಕೆಯನ್ನು ಕ್ರಿಯಾರೂಪಕ್ಕೆ ತರಬಹುದು..ನಿಜ. ತನ್ನೆಲ್ಲಾ ಸಾಧನೆಸಾಮರ್ಥ್ಯಗಳನ್ನು ಮಮತೆಯಿಂದ ಪೋಷಿಸುವವರಿದಿರು – ಕೃತಜ್ಞತೆಯ ಭಾರದಿಂದ ಹೆಣ್ಣು ತಲೆಬಾಗಬಹುದು ; ಸಮರ್ಪಣಾ ಭಾವತೋರಿ ಅತ್ಯಂತ ವಿಧೇಯಳಾಗಬಹುದು........ ಆದರೆಅವಳ ಭಾವಪರತೆ ಅವಳೆಲ್ಲಾ ಸಾಧನೆಗೆ ಪೂರಕ ವಾಗುವಂಥದಾಗಬೇಕೇ ಹೊರತು ಮಾರಕತೆಗೆ ತಿರುಗ ಬಾರದು.

"ಛಲ, ಅರ್ಪಣಾ ಮನೋಭಾವದಿಂದ ಮಾತ್ರ ಗುರಿಮುಟ್ಟಲು ಸಾಧ್ಯ" ಎಂಬ ಆಕೆಯ ಮಾತು ಮನ ನೀಯವಾದದ್ದು. ಆ ಮಾತು ಅವಳ ಅನುಭವವಾಕ್ಯ. failure is the step of Victory ಎಂಬ ನಾಣ್ನುಡಿ, ಸೋಲನ್ನು ಒಂದು ಪಾಠವನ್ನಾಗಿ, ಸವಾಲನ್ನಾಗಿ ಸ್ವೀಕರಿ ಸುವಂಥ ಉಷಾಳಿಗೆ ಸಂಪೂರ್ಣ ಅನ್ವಯಿಸುತ್ತದೆ. ಕ್ರೀಡಾರಂಗದಲ್ಲಿ ತಾನು ಸ್ಥಾಪಿಸಿರುವ ದಾಖಲೆಯನ್ನು ಭಾರತೀಯರೇ ಮುರಿಯಬೇಕೆಂದು ಆಶಿಸುವ ಉಷಾ, ಒಲಿಂಪಿಕ್ ಕ್ಷೇತ್ರದಲ್ಲಿ ಭಾರತ ಇನ್ನೂ ಮುಂದುವರಿಯ ಬೇಕೆಂದು ಸ್ಪಷ್ಟಪಡಿಸುತ್ತಾರೆ, ಮತ್ತು ತಾನು ಸಾಧಿಸ ಬೇಕಾದ್ದು ಇನ್ನೂ ತುಂಬಾ ಇದೆ ಎಂದು ನಿಶ್ಚಯವಾಗಿ ಬಲ್ಲ ಉಷಾ, ...... ಗೆಲುವಿನ ಭರದಲ್ಲಿ ವ್ಯಾಮರೆತು ಹಾರಾಡುತ್ತಿಲ್ಲ. ಬದಲಾಗಿ ಕ್ರೀಡಾ ಸಲದ ಮಣ್ಣಲ್ಲಿ ಮತ್ತೂ ಉತ್ತಮವಾದ್ದನ್ನು ಪಡೆಯಲು ಕಳಕಳಿಯಲ್ಲಿ ತಡಕಾಡುತ್ತಿರುವವರು ತಹತಹಿಸುತ್ತಿರುವವರು.

ಸಿಂಗಾಪೂರ್ ಕ್ರೀಡಾಮೇಳ, ವಿಶ್ವ ಅಥ್ಲೆಟಿಕ್ಸ್, ಸಿಯೋಲ್ ಒಲಿಂಪಿಕ್ಸ್‌ಗಳಲ್ಲಿ ಭಾಗವಹಿಸುವುದನ್ನೇ ಎದುರು ನೋಡುತ್ತಿರುವ ; ಸಿಯೋಲ್ ಒಲಿಂಪಿಕ್ಸ್‌ನಲ್ಲಿ ಚಿನ್ನ ಗೆಲ್ಲಲು ಕನಸು ಕಾಣುತ್ತಿರುವ, ಸಾಧನೆಯ ಸನ್ನಾಹ ನಡೆಸುತ್ತಿರುವ ಉಷಾ, ಕ್ರೀಡಾ ಸಾಧನೆಗೇ ತನ್ನ ಸಂಪೂರ್ಣ ಬದುಕನ್ನು ಅರ್ಪಿಸಿಬಿಟ್ಟಿದ್ದಾಳೆ.

"ಕಳೆದ ವರ್ಷಗಳಿಗೆ ಹೋಲಿಸಿದರೆ ಭಾರತೀಯ ಕ್ರೀಡಾರಂಗದಲ್ಲಿ ತೃಪ್ತಿಕರ ಬದಲಾವಣೆಯ ಸೂಚನೆ ಯಿದೆ....... ಈವರೆಗೂ ಅಂತರ್‌ರಾಷ್ಟ್ರೀಯ ಮಟ್ಟ ದಲ್ಲಿ ತೀರಾ ಹಿಂದುಳಿದಿದ್ದ ಭಾರತದ ಹೀನಸ್ಥಿತಿ ಇನ್ನು ಮುಂದೆ ಬದಲಾಗುವುದು" ಎನ್ನುವ ಆಶಾವಾದಿ ಉಷಾ "ಕ್ರೀಡಾ ಪಟುಗಳಲ್ಲಿ ಮುಖ್ಯವಾಗಿ ಅರ್ಪಣಾ ಮನೋಭಾವ ಇರಬೇಕು"- ಎಂಬ ಮಾತಿನಲ್ಲಿ ಪ್ರತಿ ಯೊಬ್ಬ ಕ್ರೀಡಾ ಪಟುವಿಗೂ ಮನನೀಯವಾದ ಕಿವಿ ಮಾತನ್ನು ಹೇಳಿದ್ದಾಳೆ.

ಉಷಾ ಕ್ರೀಡೆಗೆ ಸಂಬಂಧಿಸಿದಂತೆ ನುಡಿವ ಮಾತು ಗಳೆಲ್ಲಾ ಅಪಾರ ಅನುಭವದಾಳದಿಂದ ಮಥಿಸಲ್ಪಟ್ಟು ಉಕ್ಕೇರಿ ಬಂದ ನುಡಿಮುತ್ತುಗಳು ; ಕೇವಲ ಕ್ರೀಡಾ ಪಟುಗಳಿಗೆ ಮಾತ್ರವಲ್ಲ ; ಆದರ್ಶದ ಬೆನ್ನು ಹತ್ತಿ ತಿರು ಗುವ ಪ್ರತಿಯೊಬ್ಬ ಸಾಧಕನಿಗೂ ಸಂದೇಶ ವಾಕ್ಯಗಳು.

ಲಾಸ್ ಏಂಜಲೀಸ್ ಒಲಿಂಪಿಕ್ಸ್‌ನಲ್ಲಿ 400ಮೀ. ಫೈನಲ್ಸ್ ತಲುಪಿದ ಉಷಾ, 55.42 ಸೆಕೆಂಡ್‌ಗಳಲ್ಲಿ ಈ ದೂರವನ್ನು ಮುಗಿಸಿ ಕೇವಲ ನೂರನೇ ಒಂದು ಸೆಕೆಂಡಿ ನಲ್ಲಿ ಐತಿಹಾಸಿಕ ಪದಕವನ್ನು ಮೊರಾಕ್ಕೋ ದೇಶದ ನವಾಲ್ ಎಲ್ ಮೂಟವಾಕೆಲ್‌ಳಿಗೆ ಬಿಟ್ಟುಕೊಟ್ಟರೂ ಬಹುಮಾನಕ್ಕಿಂತಾ ಸಾಧನೆಯನ್ನೇ ಹೆಚ್ಚು ಆತ್ಮೀಯ ವಾಗಿ ಕಂಡು, "ಯಾರೇನಾದರೂ ಹೇಳಲಿ ; ನನಗಂತೂ ಇದು ಐತಿಹಾಸಿಕ ಪದಕ ಗಳಿಸಿದಂತೆಯೇ" ಎನ್ನುತ್ತಾಳೆ.

ದೆಹಲಿಯ ಏಷ್ಯಾಡ್‌ನಲ್ಲಿ ಲಿಡಿಯಾ ಡಿ. ವೇಗಾ ಳಿಂದ ಸೋತಾಗಲೂ, ಲಾಸ್ ಏಂಜಲೀಸ್ ಒಲಿಂಪಿಕ್ಸ್ ನಲ್ಲಿ ನವಾಲ್. ಎಲ್. ಮೂಟವಾಕೆಲ್‌ಳಿಂದ ಕಂಚಿನ ಪದಕ ವಂಚಿತಳಾದರೂ ಉಷಾ, ಈ ಪರಾಭವದ, ಹತಾಶೆಯ ಆಚೆ ತ್ಯಾಗ, ಛಲ, ನಿಷ್ಠೆಗಳ ತಾಣವಾಗಿ ಗೆಲುವಿನೆಡೆ ದಾಪುಗಾಲು ಹಾಕಿದವಳು.

ಜಕಾರ್ತಾದಲ್ಲಿ ಐದುಚಿನ್ನ, ಒಂದು ಬೆಳ್ಳಿ ಪಡೆದು ಸಿಯೋಲಿನಲ್ಲಿ ನಾಲ್ಕು ಚಿನ್ನ, ಒಂದು ಬೆಳ್ಳಿ ಪಡೆದು ಭಾರತದ ಕ್ರೀಡಾಕ್ಷೇತ್ರಕ್ಕೆ ಜೀವತುಂಬಿದ ಉಷಾ, ಅಭಿ ನಂದನಾತ್ಮಕವಾಗಿ, ಗೌರವ ಸೂಚಕವಾಗಿ, 'ಚಿನ್ನದ ಶೂ' ಕಾಣಿಕೆ ಪಡೆದಾಗ,

"ಹೊಗಳಿ ಅಟ್ಟಕ್ಕೇರಿಸುತ್ತಿದ್ದಾರೆ. ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಈ ಸಾಧನೆ ಅಷ್ಟೇನೂ ಹಿರಿದಲ್ಲ. ಉಷಾಳ ಸಾಧನೆ ಇಷ್ಟೇ ಸಾಲದು" ಎಂದು ವಿಮರ್ಶಿಸಿದ ಜನರೂ ಇದ್ದಾರೆ ; ಅಂತೆಯೇ, ಅವಳ ಬಗ್ಗೆ ಆಡುವ ಮಾತುಗಳೆಲ್ಲಾ ಕೇವಲ ಹೊಗಳಿಕೆಗಳೇ ಆಗಿ ಉಳ್ಳ ಜನರೂ ಇದ್ದಾರೆ. ಆದರೆ, "ನಾನು ಸಾಧಿಸಬೇಕಾದ್ದು ಇನ್ನೂ ಬಹಳಷ್ಟಿದೆ" ಎಂದು ಸ್ವತಃ ತಾನೇ ತಿಳಿದು ಕೊಂಡಿರುವವಳು ಉಷಾ. ಆದ್ದರಿಂದ, ಎಂಥ ವಿಮರ್ಶೆ ಗಳ; ಹೊಗಳಿಕೆಗಳ ಮಧ್ಯೆಯಲ್ಲಿದ್ದರೂ ಯಶೋ

ಹಾದಿಯಲ್ಲಿಟ್ಟ ಏಕಾಗ್ರತೆ ಲವಲೇಶವೂ ಜಾರದೇ ಅವಳನ್ನು ಗುರಿಯೆಡೆಗೆಟ್ಟುತ್ತಿದೆ. ಕ್ರೀಡಾ ಚೇತನದ ತಪಸ್ವಿಯನ್ನಾಗಿಸಿದೆ. ಈ ತಪಸ್ವಿಗೆ ಸಿಯೋಲ್‌ನ ಒಲಿಂಪಿಕ್ಸ್ ಸ್ವರ್ಣದ ರೂಪದಲ್ಲಿ ಯಶಸ್ಸು ಲಭಿಸೀತೇ? ಎಲ್ಲರ ಆಶಾವಾದದ, ಕುತೂಹಲದ, ಹಾರೈಕೆಯ, ಕೋರಿಕೆಯ, ಅಭಿಲಾಶೆಯ ಕಣ್ಣುಗಳಲ್ಲಿ ಕುಣಿಯುತ್ತಿರುವ ಪ್ರಶ್ನೆ ಇದು.

---

# ನಾರ್ವೆಯ ಮಹಿಳಾ ಪ್ರಧಾನಿ

ಜಗತ್ತಿನ ಬಹಳಷ್ಟು ಜನರ ಕುತೂಹಲ ಕೆರಳಿಸಿರುವ ರಾಜಕೀಯ ಬೆಳವಣಿಗೆಯ ಕೇಂದ್ರ ನಾರ್ವೆದೇಶ. 1986ರ ಮೇನಲ್ಲಿ ಅಲ್ಲಿಯ ಜನತೆ ಮಹಿಳೆಯೊಬ್ಬರನ್ನು ಪ್ರಧಾನ ಮಂತ್ರಿಯ ಪದವಿಗೆ ಆಯ್ಕೆ ಮಾಡಿದ್ದು ಒಂದು ಮಹತ್ವದ ಅಂಶ. ಗ್ರೋ ಹಾರ್ಲೆಮ್ ಬ್ರುನ್ ಡೆಟ್‌ಲ್ಯಾಂಡ್ ಇಂದು ಪಶ್ಚಿಮ ಯೂರೋಪಿನ ರಾಜಕೀಯ ರಂಗದಲ್ಲಿ ಹೊಸ ಭರವಸೆಯ ನಕ್ಷತ್ರ.

ಹಾರ್ಲೆಮ್ ಸರ್ಕಾರದಲ್ಲಿ ಮಹಿಳೆಯರದೇ ಬಹು ಪಾಲು ಪ್ರಾತಿನಿಧ್ಯ. ಹದಿನೆಂಟು ಜನರ ಸಂಪುಟದಲ್ಲಿ ಎಂಟು ಜನ ಮಹಿಳೆಯರು ಜಗತ್ತಿನ ಯಾವುದೇ ದೇಶಕ್ಕಿಂತ ನಾರ್ವೆಯಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಅತ್ಯಂತ ಹೆಚ್ಚಾಗಿದೆ. ಸ್ತ್ರೀಯರ ಈ ಪ್ರಾತಿನಿಧ್ಯ ಪರಂಪರಾಗತವಾಗಿ ಪುರುಷರಿಗೆ ಬಳುವಳಿಯಾಗಿ ಬಂದ ಹಲವಾರು ಸೌಕರ್ಯ ಹಾಗೂ ಸೌಲಭ್ಯಗಳಿಗೆ ಸಂಚಕಾರ ಹಾಕುತ್ತವೆ. ವಿದ್ಯಾಭ್ಯಾಸ ಹಾಗೂ ಧಾರ್ಮಿಕ ಮಂತ್ರಿಯಾದ ಕ್ರಿಸ್ಟಿ ಕೊಂತಿ ಗ್ರಾಂಡಲ್ "ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆಯರನ್ನು ತುಳಿಯಲಾಗುತ್ತಿರುವುದರಿಂದ ಸ್ತ್ರೀಯರನ್ನು ಬಿಷಪ್‌ಗಳಾಗಿ ನೇಮಕ ಮಾಡುವ ಇಚ್ಛೆ ಇದೆಯೆಂದು ನುಡಿಯುತ್ತಾಳೆ.

ಸಂಸದೀಯ ನ್ಯಾಯ ಸಮಿತಿಯ ಮುಖ್ಯಸ್ಥೆಯಾದ ಇಂಗರ್‌ಪೆಡಲ್‌ಸನ್ "ಇದುವರೆಗೂ ನಾರ್ವೆಯ ಸಿಂಹಾಸನದ ದೊರೆಯ ಪಟ್ಟ ಪುರುಷರಿಗೆ ಮೀಸಲಾಗಿತ್ತು. ಈಗ ಅವನ್ನು ಸ್ತ್ರೀಯರಿಗೂ ಮೀಸಲಾಗಿಡಬೇಕೆಂಬ ತಿದ್ದುಪಡಿಯ ಕರಡನ್ನು ಸರಕಾರ ಮಂಡಿಸುತ್ತದೆ. ಇದರ ಪ್ರಕಾರ ಪ್ರಕಾರ ಈಗ ತಾನೆ ಹದಿನೈದರ ಹರೆಯಕ್ಕೆ ಕಾಲಿಟ್ಟ ರಾಜಕುಮಾರಿ ಮಾರ್ಥಾಲೂಯಿಸ್ ನಾರ್ವೆಯ ರಾಣಿಯಾಗಿ ಪಟ್ಟವೇರಲಿದ್ದಾಳೆ.

ಸ್ತ್ರೀ ಪುರುಷರ ನಡುವೆ ಸಮಾನತೆಯ ಸೇತುವೆಯ ನಿರ್ಮಾಣದಲ್ಲಿ ಆಡಳಿತದಲ್ಲಿರುವ ಲೇಬರ್ ಪಕ್ಷ ಕಂಕಣ ಬದ್ಧವಾಗಿದೆ. ಪ್ರಧಾನ ಮಂತ್ರಿಯಾಗಿ ಆಯ್ಕೆಯಾದ ತಕ್ಷಣ ಗ್ರೋಗೆ ಮಂತ್ರಿ ಪದವಿಗೆ ಅರ್ಹತೆ ಪಡೆದಿದ್ದ ಸ್ತ್ರೀಯರನ್ನು ಆಯ್ಕೆ ಮಾಡುವುದು ಕಷ್ಟದಾಯಕವಾಗಲಿಲ್ಲ. ಸ್ತ್ರೀಯರ ಪರವಾದ ಈ ನಿಲುವು ಪುರುಷ ರಾಜಕಾರಣಿಗಳ ಕುಹಕ, ಟೀಕೆಗಳಿಂದ ಮುಕ್ತವಾಗಿರಲಿಲ್ಲ ಸಮಾನತೆಯ ಮೆಟ್ಟಲುಗಳಿಗಾಗಿ ನಡೆಯುವ ಈ ಹೋರಾಟಕ್ಕೆ ಅಪೂರ್ವವಾದ ಅರ್ಥವಿದೆಯೆಂದು ಹೇಳುವ ಗ್ರೋ ಕಷ್ಟದಾಯಕವಾಗಿದ್ದರೂ, ನನ್ನ ಈ ನಿಲುವು ಹಾಗೂ ಸ್ತ್ರೀಯರ ಪರವಾದ ಹೋರಾಟ ನನಗೆ ಅಪಾರವಾದ ವಿಶ್ವಾಸವನ್ನು ನೀಡಿದೆಯೆನ್ನುತ್ತಾಳೆ.

ಗ್ರೋಳ ರಾಜಕೀಯ ನಿಲುವುಗಳನ್ನು ಟೀಕಿಸಲಾಗುತ್ತಿದ್ದರೂ, ಅವಳ ರಾಜಕೀಯ ಭವಿಷ್ಯವೇನಿದ್ದರೂ, ಪರಂಪರಾಗತವಾಗಿ ನಡೆದು ಬಂದ ಪುರುಷ ಪ್ರಧಾನ ದಿಕ್ಕನ್ನು ಬದಲಾಯಿಸುವಲ್ಲಿ ಹಾಗೂ ವಿವಿಧ ರಂಗದಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಹೆಚ್ಚುತ್ತಿರುವುದಕ್ಕೆ ಗ್ರೋ ಕಾರಣವೆಂದರೆ ತಪ್ಪಾಗಲಾರದು.

# ಹದ್ದುಗಳು

ನೀಲ ಗಗನದ ಹೊದಿಕೆಗೆ ಜೋತು
    ಹಾರಾಡುತಿವೆ ಹದ್ದುಗಳು
ಬಲಿತ ರೆಕ್ಕೆಯ ಗಂಡಾಗುಂಡಿ ಹದ್ದುಗಳ
ನೂರಾರು ಮೈಲೀಚೆಯ
ಸುಂದರ ಸಸ್ಯ ಶ್ಯಾಮಲ ಧಾತ್ರಿಯಲ್ಲೆ
        ನೆಟ್ಟಿದ್ದಾವೆ
ಅವುಗಳ ಸೂಕ್ಷ್ಮ – ಕ್ರೂರ ಕಣ್ಣುಗಳು

ಹದಿಹರೆಯದ ನನ್ನ ಹಂದರ
ಅರಳುವ ಮುನ್ನ
ನಾ ಕಟ್ಟಿದ ನನ್ನದೇ ಆದ ಕನಸಿನ ಗುಡಿಸಲು
ಕೊಲ್ಮಿಂಚು ಈ ರಣ ಹದ್ದುಗಳಿಗೆ
ಕೊಕ್ಕುತಾಗಿ ನುಜ್ಜು ಗುಜ್ಜಾಗುವ ಮೊದಲು
ನನ್ನ ಹುಯಿಲು
ಕರಟದ ಒಳಗಿನ ಎಳೆಗಾಯಿಯಂತಾಯಿತು
ನನ್ನ ಹಾರಾಟ, ಓಡಾಟ, ತಾಕಲಾಟ
ಎಲ್ಲ ಹದ್ದು ನಿರ್ಮಿಸಿದ ಬೇಲಿಯ ಒಳಗೆ

ಅಲ್ಲಲ್ಲಿ ಕಳ್ಳಿಗಿಡ ನೆಟ್ಟಿದ್ದಾರೆ
ಹೂ ಕೊಡಲು ಅಲ್ಲ, ಬದಲು
ಬೇಲಿ ಭದ್ರ ಪಡಿಸಲು
ಕಥೆ-ಕಾದಂಬರಿ ಓದಿ ಹೆಣ್ಣು ಹಾಳಾಯಿತೆಂದು
ಮಂಡೆ ಪೂರಾ ಕೆಟ್ಟಿತೆಂದು
ಕೇರಿಯೆಲ್ಲ ಡಂಗುರ ಸಾರಿ

ನನ್ನ ಮತ್ತು ಗ್ರಂಥಾಲಯದ
ವಾರ ಪತ್ರಿಕೆಗಳ
ಕೊನೆಗೆ ದಿನ ಪತ್ರಿಕೆಗಳ
ಸಂಬಂಧವನ್ನೇ ಚಿವುಟಿ ಹಾಕಿದ್ದಾರೆ
ಯಾರ್ಯಾರೋ ವಹಿಸುವ
ಈ ಮಧ್ಯಸ್ಥಿಕೆಯಲ್ಲಿ
ಕೇಳಿ ಬರುವ ಚರಣವೊಂದೇ
ಮುಗು, ಪ್ರವಾಹದ ವಿರುದ್ಧ
ಈಜುವುದು ವ್ಯರ್ಥವೆಂದು

● ಹೇಮಾ ಎಸ್. ಕಡಂಬರ್



# ಮಹಿಳೆ ಮತ್ತು ಪರಿಸರ



ಹೆಚ್ಚುತ್ತಿರುವ ಕೈಗಾರಿಕೀಕರಣ, ನಗರೀಕರಣದ ಪ್ರಭಾವಗಳಿಂದಾಗಿ ಸುತ್ತಲಿನ ಪರಿಸರ ವಿನಾಶದ ಅಂಚಿನತ್ತದೆ. ಅರಣ್ಯ ನಾಶದ ಕ್ರೂರ ಪರಿಣಾಮವನ್ನು ಮೊದಲು ಎದುರಿಸುವವರು ಗುಡ್ಡಗಾಡಿನ ಮತ್ತು ಅಲೆಮಾರಿಜನಾಂಗದವರು. ಇವೆರಡು ವರ್ಗಗಳ ಜೊತೆಗೆ ಹಳ್ಳಿಗಾಡಿನ ಎಲ್ಲ ಮಹಿಳೆಯರ ಪರಿಸರ ನಾಶದ ಪರಿಣಾಮವನ್ನು ಅತ್ಯಂತ ತೀವ್ರವಾಗಿ ಹಾಗೂ ತೀಕ್ಷ್ಣವಾಗಿ ಅನುಭವಿಸುತ್ತಿದ್ದಾರೆ.

ನಮ್ಮ ದೇಶದ ಗ್ರಾಮಗಳಲ್ಲಿ ಪ್ರತಿ ನಿತ್ಯ ಸೂರ್ಯ ಉದಯಿಸುವುದು ಉರುವಲು, ನೀರು, ಹುಲ್ಲು ಮುಂತಾದ ಮೂಲಭೂತ ಅವಶ್ಯಕ ಸಾಮಗ್ರಿಗಳ ಪರದಾಟ ದೊಂದಿಗೆ. ಪರಿಸರದಲ್ಲಿ ಇವುಗಳ ಕೊರತೆ ಉಂಟಾದಂತೆ ಈ ಪರದಾಟ ಕ್ರೂರವಾಗುತ್ತ ಹೆಚ್ಚು ಪ್ರಯಾಸದಾಯಕವಾಗುತ್ತ ಹೋಗುತ್ತದೆ. ಗ್ರಾಮಗಳಲ್ಲಿ ಮಹಿಳೆ ತರುಣಿಯಾಗಿರಲಿ, ಗರ್ಭಿಣಿಯಾಗಿರಲಿ, ಆಕೆಗೆ ಈ ಪರದಾಟ ಅನಿವಾರ್ಯ. ಪ್ರಾಯಶ: ಇವರನ್ನುಳಿದು ಇನ್ನಾವ ವರ್ಗವೂ ಪರಿಸರ ನಾಶದಿಂದ ಇಷ್ಟೊಂದು ಹಿಂಸೆಯನ್ನನುಭವಿಸಲಾರರು. ಕಿತ್ತು ತಿನ್ನುವ ಬಡತನ, ಬದುಕಿಗೆ ಆಧಾರವಾದ ಪರಿಸರದ ನಾಶ ಇವುಗಳ ನಡುವೆ ಸಿಲುಕಿದ ಗ್ರಾಮೀಣ ಮಹಿಳೆ ಇಂದು ಸಹನೆಯ ಕೊನೆ ಮುಟ್ಟಿದ್ದಾಳೆ.

ಹಳ್ಳಿಗಾಡುಗಳಲ್ಲಿನ ಬಹು ಪಾಲು ಬಡಕುಟುಂಬಗಳ ಜೀವನ ಪರಿಸರದಲ್ಲಿ ದೊರೆಯುವ ಅನೇಕ ಜೀವನಾವಶ್ಯಕ ವಸ್ತುಗಳೊಂದಿಗೆ ಹಾಸುಹೊಕ್ಕಾಗಿ ಬೆರೆತುಕೊಂಡಿದೆ. ಜೈವಿಕ ಸಂಪತ್ತಿನ (Biomass) ವಿವಿಧ ರೂಪಗಳಾದ ಉರುವಲು, ಗೊಬ್ಬರ, ನಾಟ, ಹುಲ್ಲು ಮಾಡುಗಳು, ಗಿಡಮೂಲಿಕೆಗಳು ಗ್ರಾಮೀಣ ಬದುಕಿನಿಂದ ಬೇರ್ಪಡಿಸಲಾಗದ ಪ್ರಮುಖ ಅಂಶಗಳಾಗಿವೆ. ನೀರಿನ ಮೂಲಗಳು ಕೂಡಾ ಜೈವಿಕ ಸಂಪತ್ತನ್ನು ಅವಲಂಬಿಸಿವೆ. ವರ್ಷದಲ್ಲಿ ಕೆಲವೇ ತಿಂಗಳುಗಳಲ್ಲಿ ಮಳೆ ಬೀಳುವ ನಮ್ಮ ದೇಶದಲ್ಲಿ ಮುಂಗಾರು ಕಳೆದ ಕೆಲವೇ ತಿಂಗಳುಗಳಲ್ಲಿ ಕೆರೆ ಬಾವಿಗಳು ಬತ್ತಿಹೋಗುತ್ತವೆ. ಇದಕ್ಕೆ ಸುತ್ತಲಿನ ಜೈವಿಕ ಸಂಪತ್ತಿನ ನಾಶವು ಕಾರಣವಾಗುತ್ತದೆ. ಉರುವಲು, ಕಟ್ಟಡದ ವಸ್ತುಗಳನ್ನು ನೇರವಾಗಿ ಸುತ್ತಲಿನ ಪರಿಸರದಿಂದ ಪಡೆಯುತ್ತಿರುವುದರಿಂದ ಜೀವನಾಧಾರ ಜೈವಿಕ ಸಂಪತ್ತಿನ ಮೂಲವಾಗದೇ ಪೋಲಾಗುತ್ತಿರುವುದು ಗಮನಿಸಬೇಕಾದ ಒಂದು ಮುಖ್ಯ ಅಂಶ.

ಗ್ರಾಮದ ಜನತೆಗೆ ಕೆಲಸ ದೊರಕಿಸುವ ಕ್ಷೇತ್ರಗಳಾದ ವ್ಯವಸಾಯ,

ಅರಣ್ಯ, ಗ್ರಾಮೀಣ ಕೈಗಾರಿಕೆಗಳೂ ಸಹ ಕಚ್ಚಾ ವಸ್ತುಗಳಿಗಾಗಿ ಜೈವಿಕ ಸಂಪತ್ತನ್ನು ಅವಲಂಬಿಸಿವೆ.

ಇಂತಹ ಹಾಸು ಹೊಕ್ಕಾದ ಸಂಬಂಧದ ಮೇಲೆ ಇಂದು ಕೈಗಾರಿಕೀಕರಣ, ನಗರೀಕರಣ, ಹಣಸಂಪಾದನೆಯ ಮಾರ್ಗಗಳು ಬಹಳ ಪ್ರಭಾವ ಬೀರಿವೆ. ಅರಣ್ಯನಾಶದಿಂದ ಜೈವಿಕ ಸಂಪತ್ತನ್ನು ನಾಶಮಾಡುತ್ತಿರುವುದಲ್ಲದೆ, ಗ್ರಾಮೀಣ ಬದುಕಿನ ದೈನಂದಿನ ಅಗತ್ಯಗಳನ್ನೂ ನಗರದ ಹಾಗೂ ಕೈಗಾರಿಕೆಯ ಅವಶ್ಯಕತೆಗಳನ್ನಾಗಿ ಪರಿವರ್ತಿಸಲಾಗುತ್ತಿದೆ. ಅರಣ್ಯ ನಾಶದ ಕ್ರೂರ ಪರಿಣಾಮವನ್ನು ಮೊದಲು ಎದುರಿಸುವವರು ಗುಡ್ಡಗಾಡಿನ ಮತ್ತು ಅಲೆಮಾರಿ ಜನಾಂಗದವರು. ಇವೆರಡು ವರ್ಗಗಳ ಜೊತೆಗೆ ಹಳ್ಳಿಗಾಡಿನ ಎಲ್ಲ ಮಹಿಳೆಯರು ಪರಿಸರ ನಾಶದ ಪರಿಣಾಮವನ್ನು ಅತ್ಯಂತ ತೀವ್ರವಾಗಿ ಹಾಗೂ ತೀಕ್ಷ್ಣವಾಗಿ ಅನುಭವಿಸುತ್ತಿದ್ದಾರೆ.

ಲಿಂಗಾಧಾರಿತ ಶ್ರೇಣೀಕೃತ ವ್ಯವಸ್ಥೆಯಿಂದಾಗಿ ಮಹಿಳೆ ಮನೆಯಲ್ಲಿ ಸಮಾಜದ ಇತರ ಕ್ಷೇತ್ರದಲ್ಲಿ ದ್ವಿತೀಯ ಸ್ಥಾನವನ್ನು ಪಡೆದಿದ್ದಾಳೆ. ಕುಟುಂಬದಲ್ಲಿ ಪುರುಷರ ಊಟದ ನಂತರವೇ ಊಟಮಾಡಬೇಕಾಗಿರುವ ಈಕೆ. ಆರೋಗ್ಯದ ನಿರ್ಲಕ್ಷ್ಯ, ಕೆಲಸದ ಒತ್ತಡಗಳಿಂದಾಗಿ ದ್ವಿಮುಖ ರೀತಿಯಲ್ಲಿ ಬಳಲಬೇಕಾಗುತ್ತದೆ. ಇದರ ಜೊತೆಗೆ ಕುಟುಂಬದ ಉತ್ಪಾದನಾ ಮೂಲಗಳಾದಜಮೀನು ಮುಂತಾದವುಗಳ ಮೇಲೆ ಆಕೆಯ ಹಕ್ಕಿಲ್ಲವಾದ್ದರಿಂದ ಕುಟುಂಬದಲ್ಲಿ ಆಕೆ ಪಡೆಯುವ ಸೌಲಭ್ಯಗಳು-ದ್ವಿತೀಯ ದರ್ಜೆಯದು.

ಇಂತಹ ತ್ರಿಶಂಕು ಸ್ಥಿತಿಯಲ್ಲಿರುವ ಆಕೆಯ ಹಲವು ಸಮಸ್ಯೆಗಳ ಪರಿಹಾರಕ್ಕೆ ಕಾರಣವಾದ ಪರಿಸರವು ಇಂದು ನಾಶವಾಗುತ್ತಿರುವುದು ಆಕೆಗೆ ತೀವ್ರ ಆತಂಕವನ್ನುಂಟು ಮಾಡುತ್ತದೆ. ಸಾಂಸ್ಕೃತಿಕವಾಗಿ ಒಪ್ಪಿಕೊಂಡು ಬಂದಿರುವ ವ್ಯವಸ್ಥೆಯಿಂದಾಗಿ ಅಡಿಗೆ, ಮಕ್ಕಳಲಾಲನೆ, ಪಾಲನೆ, ವ್ಯವಸಾಯಕ್ಕೆ ಸಂಬಂಧಪಟ್ಟ ಕೆಲಸಗಳು, ದನಕರುಗಳನ್ನು ನೋಡಿಕೊಳ್ಳುವುದು ಮಹಿಳೆಯ ಪಾಲಿಗೆ ಉಳಿಯುವುದಲ್ಲದೆ, ಉರುವಲು, ಹುಲ್ಲು ಮತ್ತು ನೀರನ್ನು ಸಂಗ್ರಹಿಸುವುದು ಆಕೆಯ ಹೊಣೆಯೇ ಆಗುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ಇವುಗಳನ್ನು ದೊರಕಿಸಿಕೊಳ್ಳುವುದು ಬಹಳ ಶ್ರಮದಾಯಕ ಸಂಗತಿ ಆಗಿರುವುದರಿಂದ ಆಕೆಯು ದಿನವಿಡಿ ಬಹಳಷ್ಟು ಕಾಲವನ್ನು ಇವುಗಳ ಹುಡುಕಾಟದಲ್ಲಿ ಕಳೆಯಬೇಕಾಗುತ್ತದೆ. ದಿನದಿನಕ್ಕೆ ಹೆಚ್ಚುತ್ತಿರುವ ದಾರಿದ್ರ್ಯ ಪುರುಷರ ವಲಸೆ, ವ್ಯವಸಾಯದಲ್ಲಿನ ಮಾರ್ಪಾಡು-ಆಕೆಯ ಸ್ಥಿತಿಯನ್ನು ಶೋಚನೀಯ ಗೊಳಿಸುತ್ತಿವೆ.

ಆಶ್ಚರ್ಯಕರ ಸಂಗತಿಯೆಂದರೆ ಕೆಲವು ಉತ್ತಮ ಸಮೀಕ್ಷೆಗಳು, ಹಾಗೂ ಅಧ್ಯಯನಗಳು ಸಹ ಗ್ರಾಮೀಣ ಮಹಿಳೆಯ ಜೀವನ ಹೇಗೆ ನೈಸರ್ಗಿಕ ಮೂಲಗಳ ಸುತ್ತ ಹೆಣೆದುಕೊಂಡಿದೆ ಮತ್ತು ಅವುಗಳ ನಾಶ ಹೇಗೆ, ಸಮಸ್ಯೆಗಳನ್ನು ಆಕೆಗೆ ತಂದೊಡ್ಡುತ್ತವೆ ಎನ್ನುವುದನ್ನು ತೋರಿಸುವಲ್ಲಿ ವಿಫಲವಾಗಿವೆ. "ಭಾರತದಲ್ಲಿ ಮಹಿಳೆಯ ಸ್ಥಾನ" ಪ್ರಖ್ಯಾತ ವರದಿಯೂ ಸಹ ಮಹಿಳೆ ದಿನನಿತ್ಯ ನೀರು, ಉರುವಲು ಮುಂತಾದ ವಸ್ತುಗಳನ್ನು ಸಂಗ್ರಹಿಸುವಲ್ಲಿ ಎದುರಿಸಬೇಕಾದ ಸಮಸ್ಯೆಗಳನ್ನು ವಿಶ್ಲೇಷಿಸುವುದಿಲ್ಲ. ಆರನೇ ಪಂಚವಾರ್ಷಿಕ ಯೋಜನೆಯ .ಒಂದು ಅಧ್ಯಯನವಾದ, ಭಾರತದ ಯೋಜನೆ ದಾಖಲಾತಿಗಳಲ್ಲಿ ಪ್ರಪ್ರಥಮ ಎಂದು ಹೊಗಳಲ್ಪಟ್ಟ "ಮಹಿಳೆ ಮತ್ತು ಅಭಿವೃದ್ಧಿ" ಮಹಿಳೆ ದಿನನಿತ್ಯದ ಜೈವಿಕ ಸಂಪತ್ತಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಎದುರಿಸಬೇಕಾದ ಸಮಸ್ಯೆಗಳ ಬಗ್ಗೆ ಚಕಾರವೆತ್ತುವುದಿಲ್ಲ. ಆದರೆ ಚಿಪ್ಕೊ ಮಹಿಳೆಯರ ಪ್ರತಿಭಟನೆ ತೋರಿಸುವಂತೆ ಸಧ್ಯದಲ್ಲಿ ಇಷ್ಟೊಂದು ತೀವ್ರವಾಗಿ ಬಾಧಿಸುತ್ತಿರುವ ಬೇರೆ ಯಾವುದೇ ಸಮಸ್ಯೆ ಇರಲಿಕ್ಕಿಲ್ಲ.

**ಮಹಿಳೆ ಮತ್ತು ಪುರುಷರ ವಲಸೆ :-** ನಮ್ಮ ಗ್ರಾಮೀಣ ಮಹಿಳೆಯರ ಮೇಲೆ ಹೆಚ್ಚು ಕೆಲಸದ ಒತ್ತಡವನ್ನು ಹೇರುವಲ್ಲಿ ಕಾರಣವಾಗಿರುವ ಅಂಶಗಳಲ್ಲಿ ಮುಖ್ಯವಾದದ್ದು ಪುರುಷರ ವಲಸೆ ಜನಸಂಖ್ಯೆಯ ಹೆಚ್ಚಳದಿಂದಾಗಿ ವ್ಯವಸಾಯದ ಮೇಲಿನ ಅವಲಂಬನೆಯಲ್ಲಿ ಹೆಚ್ಚಾದ ಒತ್ತಡ, ಮತ್ತು ವ್ಯವಸಾಯದಲ್ಲಿನ ಯಂತ್ರೀಕರಣ, ಪುರುಷರನ್ನು ಉದ್ಯೋಗಗಳನ್ನು ಅರಿಸಿಕೊಂಡು ವಲಸೆ ಹೋಗುವಂತೆ ಪ್ರೇರೆಪಿಸಿದವು. ಅಲ್ಲದೆ ನೀರಾವರಿ ಸೌಲಭ್ಯ, ಹೆಚ್ಚು ಇಳುವರಿ ಕೊಡುವ ತಳಿಗಳು ಕೆಲವು ಪ್ರದೇಶಗಳಲ್ಲಿ ಸ್ಥಳೀಯ ವ್ಯವಸಾಯಕ ಸಂಬಂಧಗಳಲ್ಲಿ ಏರುಪೇರನ್ನುಉಂಟುಮಾಡಿದವು. ಬಿಹಾರ ಮತ್ತು ಉತ್ತರ ಪ್ರದೇಶದ ಪೂರ್ವಭಾಗದ ಕೂಲಿಕಾರರು ಪಂಜಾಬಿಗೆ ವಲಸೆ ಹೋಗುವುದು ಈಗ ಬಹಳ ಹೆಚ್ಚಾಗಿರುವುದು ಕಂಡುಬರುತ್ತಿದೆ. ಇದೇ ರೀತಿ ಮೀನುಗಾರಿಕೆಯನ್ನವಲಂಬಿಸಿದ್ದ ಕನ್ಯಾಕುಮಾರಿಯ

ಹಲವಾರು ಹಳ್ಳಿಗಳ ಪುರುಷರು ಇಂದು ವಲಸೆ ಹೋಗಲು ಪ್ರಾರಂಭಿಸಿದ್ದಾರೆ. ಕನ್ಯಾಕುಮಾರಿ ಇಂದು ಕೇರಳ ಮತ್ತು ತಮಿಳುನಾಡಿನ ಪೂರ್ವಭಾಗದ ಯಾಂತ್ರೀಕರಣ ಮೀನುಗಾರಿಕೆ ಕೆಲಸಗಾರರನ್ನು ಹಿಡಿಯುವ ಪ್ರದೇಶವಾಗಿ ಮಾರ್ಪಟದೆ. ಕನ್ಯಾಕುಮಾರಿಯ ಮೀನುಗಾರರು ವರ್ಷದಲ್ಲಿ 2 ರಿಂದ 7 ತಿಂಗಳನ್ನು ಕೊಚ್ಚಿನ್, ಲೆರುವಲ್‌ಲೀಲಿ, ಟ್ರಿವೇಂಡ್ರಮ್‌ಗಳಲ್ಲಿನ ಯಾಂತ್ರೀಕರಣ ದೋಣಿಗಳಲ್ಲಿ ಕಳೆಯುತ್ತಾರೆ. ಕೆಲವು ಸಾರಿ ಒರಿಸ್ಸಾ ಕರ್ನಾಟಕಗಳಿಗೂ ಹೋಗುತ್ತಾರೆ.

ಕಾಡು ಮತ್ತು ಗೋಮಾಳಗಳ ನಾಶ, ಆಲೆಮಾರಿ ಮತ್ತು ಬುಡಕಟ್ಟು ಜನಾಂಗಗಳ ಮೇಲೆ ಹೆಚ್ಚು ಒತ್ತಡವನ್ನೂ ಹೇರಿ ಅವರೇ ಉದ್ಯೋಗಗಳನ್ನು ಹುಡುಕಿಕೊಂಡು ಹೋಗುವಂತೆ ಪ್ರಕಟಿಸುತ್ತಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪುರುಷರು ವಲಸೆ ಹೋಗುವುದು ಸ್ತ್ರೀಯರ ಮೇಲೆ ಗೃಹಕೃತ್ಯಗಳಲ್ಲಿ ಹೆಚ್ಚಿನ ಭಾರವನ್ನು ಹೇರುವಲ್ಲಿ ಎಷ್ಟರ ಮಟ್ಟಿಗೆ ಕಾರಣವಾಗುತ್ತವೆ ಎನ್ನುವುದು. ಕೆಳಜಾತಿಯ, ಮತ್ತು ವಿಭಕ್ತ ಕುಟುಂಬದ ಪುರುಷರು ವಲಸೆ ಹೋಗುವುದರಿಂದ ಹೆಚ್ಚಿನ ಹೊರೆ ಮಹಿಳೆಯ ಮೇಲೆ ಬೀಳುತ್ತವೆ. ಪುರುಷನ ವಲಸೆಯಿಂದಾಗಿ, ಮಹಿಳೆಯರು, ಅದರಲ್ಲೂ ಮಾತೃಪ್ರಧಾನ ಕುಟುಂಬಗಳಲ್ಲಿನ ಮಹಿಳೆಯರು ಹೆಚ್ಚು ವೇಳೆಯನ್ನು ವ್ಯವಸಾಯದಲ್ಲಿ ಕಳೆಯುವಂತೆ ಮಾಡುತ್ತಾರೆ. ಹರಿಯಾಣದಲ್ಲಿ ಪುರುಷರು ಪಟ್ಟಣಕ್ಕೆ ವಲಸೆ ಹೋಗಿ ಕೆಲಸಗಳಲ್ಲಿ ತೊಡಗಿದ ನಂತರ ವ್ಯವಸಾಯದ ಭಾರವೆಲ್ಲಾ ಅಲ್ಲಿನ ಮಹಿಳೆಯರ ಮೇಲೆ ಬಿತ್ತು. ಇದರೊಂದಿಗೆ ಅವರು ಉರುವಲು, ನೀರು, ಹುಲ್ಲನ್ನು ಸಂಗ್ರಹಿಸ ಬೇಕಾಗುತ್ತದೆ–

ಮೊದಲು ಉಚಿತ ಹಾಗೂ ಸುಲಭವಾಗಿ ಸಿಗುತ್ತಿದ್ದ ಸಾಮಗ್ರಿಗಳ ಅಭಾವವೇ ಇಂದು ಅವುಗಳನ್ನು ವಾಣಿಜ್ಯ ಸಾಮಗ್ರಿಗಳನ್ನಾಗಿಸಿದೆ, ಮೊದಲು ಹತ್ತಿಕಟ್ಟಿಗೆಗಳನ್ನು ಉಚಿತವಾಗಿ ಪಡೆಯುತ್ತಿದ್ದರೆ. ಇಂದು ಅದಕ್ಕೆ ಪ್ರತಿಯಾಗಿ ಇಂತಿಷ್ಟು ಎಕರೆ ಹತ್ತಿ ಕಟ್ಟಿಗೆಗಳನ್ನು ಕೀಳಿರಿ, ಎನ್ನುವ ಹೊಸ ಪದ್ಧತಿ ಪ್ರಾರಂಭವಾಗಿದೆ. ಪುರುಷರು ಪಡೆಯುತ್ತಿರುವ ಕಡಿಮೆ ಆದಾಯದಿಂದಾಗಿ ಅನೇಕ ಮಹಿಳೆಯರು ರಸ್ತೆ ಕೆಲಸ, ಕಾಮಗಾರಿ ಮುಂತಾದವುಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಮಹಾರಾಷ್ಟ್ರದ ಖಾಯಂ ಉದ್ಯೋಗ ಯೋಜನೆಯಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚು ಹೆಸರು ನೊಂದಾಯಿಸಿದ್ದಾರೆ ಎಂದು ತಿಳಿಸುತ್ತದೆ.



ಕುಟುಂಬಕ್ಕಾಗಿ ಅಲ್ಪಸ್ವಲ್ಪ ಹಣವನ್ನು ಸಂಪಾದಿಸುವ ಬುಡಕಟ್ಟು ಜನಾಂಗಕ್ಕೆ ಸೇರಿದ ಮಹಿಳೆಯರು ಅಕ್ರಮವಾಗಿ ಕಟ್ಟಿಗೆ ಕಡಿದು ಹೊರೆಮಾಡಿ ಪಟ್ಟಣಗಳಲ್ಲಿ ಮಾರುತ್ತಾರೆ. ಬಡತನದ ಬವಣೆಯಿಂದ ನರಳುವ ಇಂತಹ ಕುಟುಂಬದ ಮಹಿಳೆಯರಿಗೆ ಈ ಕೆಲಸ ಅನಿವಾರ್ಯ. ಇಂದು ಕಾಡಿನ ಅಧಿಕಾರಿಗಳ ಕಣ್ಣುತಪ್ಪಿಸಿ ಕಟ್ಟಿಗೆ ಸಂಗ್ರಹಿಸಿಕೊಳ್ಳಲು ಹೆಣಗಾಡುತ್ತಾಳೆ.

ಪರಿಸರವನ್ನು ಕಾಯ್ದುಕೊಳ್ಳುವಲ್ಲಿ ಸ್ತ್ರೀಯು ತೀವ್ರಾಸಕ್ತಿಯನ್ನು ಹೊಂದಿದ್ದಾಳೆ. ಚಿಪ್ಕೊ ಮಹಿಳೆಯರ ಅನುಭವದ ಪ್ರಕಾರ ಪರಿಸರದಲ್ಲಿನ ನೈಸರ್ಗಿಕ ಮೂಲಗಳನ್ನು ಕಾಯ್ದುಕೊಳ್ಳುವಲ್ಲಿ ಮಹಿಳೆಯರು ಹೆಚ್ಚು ಹೆಣಗಾಡುತ್ತಾರೆ. ವಿಷಾದಕರ ಸಂಗತಿಯೆಂದರೆ ಸಾಂಪ್ರದಾಯಿಕ ಸ್ಥಾನ ಮಾನ, ಮಿತಿಮೀರಿದ ಕೆಲಸದ ಹೊರೆ ಮುಂತಾದ ಕಾರಣದಿಂದ ಇವರು ಸಂಘಟಿತರಾಗಲು ಕಷ್ಟದಾಯಕವಾಗುತ್ತದೆ.

ಆರ್ಥಿಕ ಹಾಗೂ ಪರಿಸರದ ಬದಲಾವಣೆಗಳು ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರ ಮೇಲೆ ದುಷ್ಪ

ಪರಿಣಾಮಗಳನ್ನು ಬೀರುತ್ತವೆ ಎನ್ನುವುದು ಮೇಲ್ಕಂಡ ವರದಿಯಿಂದ ಸ್ಪಷ್ಟವಾಗುತ್ತದೆ, ವಾಣಿಜ್ಯ ಆರ್ಥಿಕತೆಯ ಕೈಗೊಂಬೆಯಾದ ಪುರುಷ, ಗೃಹಕೃತ್ಯಗಳಲ್ಲಿ ಮುಖ್ಯ ಪಾಲುವಹಿಸುವ ಸ್ತ್ರೀಯರ ಮಧ್ಯೆ ಇರುವ ಕಂದಕವನ್ನು ಪರಿಸರದ ನಾಶ ಇನ್ನೂ ಹೆಚ್ಚು ತೀವ್ರ ಗೊಳಿಸುತ್ತದೆ.

ಇಂದಿನ ಭಾರತದ ಬಡ ಮಹಿಳೆ,–ಶ್ರಮಜೀವಿ, ದುರ್ಬಲಳು, ಬೇಸತ್ತವಳು, ಅಸಂಘಟಿತಳು, ಗಣನೀಯವಿಲ್ಲದವಳು, ಅಸಹಾಯಕಳು. ಭೂಮಿಯನ್ನು ಹೊಂದದ, ಇದ್ದುದನ್ನೂ ಕಳೆದುಕೊಳ್ಳುತ್ತಿರುವ ಮಹಿಳೆಯರು ಮಿತವಾಗುತ್ತಿರುವ ಸಂಪನ್ಮೂಲ ಗಳಿಂದಾಗಿ ಅತಿ ಶೋಚನೀಯ ಸ್ಥಿತಿಯಲ್ಲಿದ್ದಾರೆ. ಕಾಡು ಹಾಗೂ ಗೋಮಾಳಗಳನಾಶ, ವ್ಯವಸಾಯದಲ್ಲಿ ಆಧುನೀಕರಣ, ಜನಸಂಖ್ಯೆಯಲ್ಲಿನ ಹೆಚ್ಚಳದಿಂದಾಗಿ, ವ್ಯವಸಾಯದಲ್ಲಿ ನಿರಾಸಕ್ತಿ ಬೆಳೆಯುತ್ತ ಹೋಗುತ್ತದೆ. ಸರಕಾರ ಫಾರೆಸ್ಟ್ ಬಿಲ್‌ಗಳಂತಹ ಯೋಜನೆಗಳನ್ನು ರೂಪಿಸುತ್ತಾ ಪರಿಸ್ಥಿತಿಯನ್ನು ಮತ್ತಷ್ಟು ಬಿಗಡಾಯಿಸು ತ್ತದೆ. ಸಂಪತ್ತಿನ ಮೂಲಗಳ ಅಭಿವೃದ್ಧಿಯನ್ನು ತಡೆಯುದೆ ಯಾವುದೇ ಕಾಯಿದೆಗಳು, ಯೋಜನೆಗಳು ಬಡ ಮಹಿಳೆಯರ ಶೋಷಣೆಯನ್ನು ಹೆಚ್ಚಿಸುವುದರ ಮೂಲಕ ಆಕೆಗೆ ಮಾರಕವಾಗುತ್ತವೆ.

ನೈಸರ್ಗಿಕವಾಗಿರುವ ಸಂಪತ್ತಿನ ಮೂಲಗಳನ್ನು ರಕ್ಷಿಸಲು ಮತ್ತು ಉಳಿಸಿಕೊಂಡು ಹೋಗಲು ಮಹಿಳೆ ಯರಲ್ಲಿ ಹೋರಾಟ ಮನೋಭಾವನೆ ಬೆಳೆಯುತ್ತದೆ ಎನ್ನುವುದನ್ನು ಚಿಪ್ಕೊ ಮತ್ತು ಅಪ್ಪಿಕೊ ಚಳವಳಿಗಳು ದೃಢಪಡಿಸುತ್ತವೆ. ಆದರೆ ಸಂಘಟನೆಯ ಹಂತದಲ್ಲಿ ವಿಫಲವಾಗುತ್ತಿರುವ ಇಂತಹ ಪ್ರಯತ್ನಗಳು ನಿರಾಸೆ ಯನ್ನುಂಟು ಮಾಡುತ್ತವೆ. ಇಂತಹ ಚಳುವಳಿಗಳು ರಚನಾತ್ಮಕ ಸಂಘಟನೆಯಾಗಿ, ದೊಡ್ಡ ಪ್ರಮಾಣದಲ್ಲಿ ರೂಪುಗೊಂಡು ಪ್ರಬಲವಾಗಿ ಬೆಳೆಯಬೇಕಾಗಿದೆ.

—ಶೈಲಜಾ ಕೆ.ವಿ.

ದಿ ಎನ್‌ವಿರಾನ್‌ಮೆಂಟ್ ಎಂಡ್ ರೂರಲ್ ಮೂಲ: ವುಮೆನ್: ಅನಿಲ್ ಅಗ್‌ರ್‌ವಾಲ

## ಫಲಿಸದ ಆಸೆ

ಗಂಡನಿದ್ದರೂ ವಿಧವೆ
ಒಂಟಿ ಬಾಳುವೆ ಮಾಡಿದಾಗ
ನೋಡುವವರ ಕೈಲೆಲ್ಲಾ
ಒಂದೊಂದು ಕಲ್ಲು
ಮತ್ತೆ ಹುಟ್ಟಿಬರುವನೇ ಕ್ರಿಸ್ತ
"ಪಾಪವನೇ ಮಾಡದವನು
ಮೊದಲ ಕಲ್ಲೆಸೆಯಲಿ" ಎನಲು ?
ಒಂಟಿತನ ನರಕವಾದಾಗ
ಆಕೆಗನ್ನಿಸಿತು ತನಗೊಂದು
ಕರುಳ ಕುಡಿ ಬೇಕೆಂದು !
ನಿಯೋಗ ಪದ್ಧತಿಗೆ
ಮಾನ್ಯತೆಯೇ ಇಲ್ಲದಾಗ
ಫಲಿಸುವುದೇ ಅವಳಾಸೆ ?
ಕಷ್ಟಸಾಧ್ಯ ಮಂತ್ರೋಪದೇಶದಿಂದ
ತಾಯಾಗಲು ಇದು ದ್ವಾಪರವಲ್ಲ
ವೈಜ್ಞಾನಿಕವಾಗಿ ಪುರುಷಸ್ಪರ್ಶ
ಇಲ್ಲದೆ ಗರ್ಭವತಿಯಾದರೂ
ತಪ್ಪದು ಆ ಶಿಶುವಿಗೆ
"ಹಾದರದ ಶಿಶು"ವೆಂಬ
ಜನ್ಮದಾತ ಬಿರುದು !
ತನ್ನ ಆಸೆಗಾಗಿ ತನ್ನ ಕಂದ
ಬಹಿಷ್ಕೃತನಾಗಬೇಕೇ ಸಮಾಜದಿಂದ ?
ಮುಂದೆ ಆ ಕಂದ ತನ್ನನ್ನೇ ನಿಂದಿಸಿದರೆ...?
ಕಲ್ಪನೆಗೇ ನಡುಗಿದವಳು
ಹೋಗಿ ಎದೆಗೊತ್ತಿ ತಂದಳು
ಎಳೆ ಬೊಮ್ಮಟೆಯೊಂದ
ಅನಾಥಾಲಯದಿಂದ...
ಕಂದನ ಕಣ್ಣ ಪಾಪೆಯಲಿ
ತನ್ನ ಬಿಂಬವ ನೋಡಿ ಕೇಳಿದಳು
ಪ್ರೀತಿ ಮಮತೆ ಸೂಸಲು
ಹೆತ್ತ ಮಗುವೇ ಆಗಬೇಕೇ ?

—ಶಶಿ



## ದಾಕ್ಷಾಯಿಣಿಯ ದುರಂತ

ಹೆಣ್ಣು ಜೀವನದಲ್ಲಿ ಅನೇಕ ತರಹದ ಆಸೆ ಆಕಾಂಕ್ಷೆ ಗಳನ್ನು ತನ್ನ ಮನಸ್ಸಿನ ತುಂಬಾ ತುಂಬಿಕೊಂಡು ಗಂಡನ ಮನೆ ಸೇರುತ್ತಾಳೆ. ಅಂತೆಯೇ ದಾಕ್ಷಾಯಿಣಿಯು ಕೂಡ ಒಬ್ಬ ಮುಗ್ಧ ಹೆಣ್ಣು. ಈಕೆಗೂ ಸಹ ಸ್ತ್ರೀ ಸಹಜ ಆಸೆ ಆಕಾಂಕ್ಷೆಗಳಿದ್ದವು, ಹೊಂಗನಸುಗಳನ್ನು ಕಾಣುತ್ತಿದ್ದಳು. ಇಂತಹ ಮುಗ್ಧೆಯ ಬಾಳು ದುರಂತಮಯವಾದದ್ದು ಒಂದು ಕಥೆ.

ದಾಕ್ಷಾಯಿಣಿ ಕಡೂರು ತಾಲ್ಲೂಕು ಚೆನ್ನಾಪುರದವಳು. ಈಕೆಗೆ ಹೇಳಿಕೊಳ್ಳುವಂತಹ ರೂಪವಿಲ್ಲದಿದ್ದರೂ ಗುಣದಲ್ಲಿ ಯಾರೂ ಅಲ್ಲಗಳೆಯುವಂತಿರಲಿಲ್ಲ. ಈಕೆಯ ತಂದೆ ಶ್ರೀಮಂತರಲ್ಲದಿದ್ದರೂ ಉಣಲು, ಉಡಲು, ನಾಲ್ಕು ಜನರಂತೆ ಜೀವಿಸಲು ಯಾವ ಕೊರತೆಯೂ ಇರಲಿಲ್ಲ.

ದಾಕ್ಷಾಯಿಣಿಗೆ ಆರು ವರ್ಷಗಳ ಹಿಂದೆ ಅಜ್ಜಂಪುರ ಹೋಬಳಿ ಆಸಂದಿ ಗ್ರಾಮದ ವಾಸಿಯಾದ ಕಲ್ಲೇಶಪ್ಪ ಎಂಬುವವರೊಂದಿಗೆ ವಿವಾಹವಾಯಿತು. ಕಲ್ಲೇಶಪ್ಪನಿಗೆ ಆಸಂದಿ ಗ್ರಾಮದಲ್ಲಿ ಅಲ್ಪಸ್ವಲ್ಪ ಜಮೀನಿದ್ದರೂ ಸುಣ್ಣದಹಳ್ಳಿ ಎಂಬಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದನು. ದಾಕ್ಷಾಯಿಣಿ ಜಮೀನು ನೋಡಿಕೊಂಡು ಆಸಂದಿಯಲ್ಲಿಯೇ ಇದ್ದಳು. ಮದುವೆಯಾಗಿ ಒಂದೆರಡು ವರ್ಷಗಳು ಗಂಡಹೆಂಡತಿ ಸುಖವಾಗಿದ್ದರು. ಮೂರನೆ ವರ್ಷಕ್ಕೆ ಕಾಲಿಡುತ್ತಿದ್ದಂತೆಯೇ ದಾಕ್ಷಾಯಿಣಿ ಬಾಳಿನಲ್ಲಿ ಬಿರುಗಾಳಿ ಸಣ್ಣದಾಗಿ ಬೀಸಲಾರಂಭಿಸಿತು. ಗಂಡ ಇಲ್ಲಸಲ್ಲದ ವಿಷಯ ತೆಗೆದು ಹೆಂಡತಿಯೊಡನೆ ಜಗಳ ಆಡುವುದು, ಕಿರುಕುಳ ಕೊಡುವುದಕ್ಕೆ ಆರಂಭ. ದಾಕ್ಷಾಯಿಣಿಗೆ ಮದುವೆಯಾಗಿ ಮೂರು ವರ್ಷವಾದರೂ ಮಕ್ಕಳಾಗಿರಲಿಲ್ಲ. ನಿಧಾನವಾಗಿ ಗಂಡ ಹೆಂಡಿರಲ್ಲಿ ವಿರಸವೇರ್ಪಟ್ಟಿತೆನ್ನಲಾಗಿದೆ.

ಕಲ್ಲೇಶಪ್ಪನು ಯಾವಾಗಲೂ ದಾಕ್ಷಾಯಿಣಿಯೊಡನೆ ಜಗಳವಾಡುತ್ತಾ "ನಿನಗೆ ಮಕ್ಕಳಿಲ್ಲ, ನಾನು ಬೇರೆ ಮದುವೆಯಾಗುತ್ತೇನೆ, ನೀನು ತವರಿಗೆ ಹೋಗು" ಎಂದು ಸಿಕ್ಕಾಪಟ್ಟೆ ಹೊಡೆಯುವುದು ಇತ್ಯಾದಿ ಅನೇಕ ತರಹದ ಹಿಂಸೆ ಕೊಡುತ್ತಿದ್ದನೆಂದು ಆರೋಪಿಸಲಾಗಿದ್ದು ತವರು ಮನೆಗೂ ಕಳುಹಿಸಿಬಿಡುತ್ತಿದ್ದನೆನ್ನಲಾಗಿದೆ. ಮತ್ತೆ ವಾಪಸ್ಸು ಕರೆದುಕೊಂಡು ಬರುತ್ತಿರಲಿಲ್ಲ. ಆಗ ದಾಕ್ಷಾಯಿಣಿಯು ತಂದೆ-ತಾಯಿಯೊಡನೆ ತನ್ನ ಕಥೆ ಹೇಳಿ ಕಣ್ಣೀರ್ಗರೆಯುತ್ತಿದ್ದಳು. ತಂದೆತಾಯಿಗಳು ಮಗಳಿಗೆ ಸಮಾಧಾನ ಮಾಡಿ ಗಂಡನ ಮನೆಗೆ ಕಳುಹಿಸಿಕೊಡುತ್ತಿದ್ದರೆನ್ನಲಾಗಿದೆ. ಏಕೆಂದರೆ ಒಂದು ಗಾದೆಯಿದೆ, "ಕೊಟ್ಟ ಹೆಣ್ಣು ಕುಲಕ್ಕೆ ಹೊರಗು" ಎಂದು, ಅದೇ ರೀತಿ ಮಾಡುತ್ತಿದ್ದರು.

ಮತ್ತೆ ಊರಿಗೆ ಹೋದರೆ ಗಂಡನಿಂದ ಹಿಂಸೆ-ಕಿರುಕುಳಗಳು ನಿರಂತರವಾಗಿ ಸಾಗುತ್ತಿದ್ದವು. "ಹೆಣ್ಣು ಸಹನಾ ಶೀಲೆ" ನಿಜ. ಆದರೆ ಎಷ್ಟು ದಿನಾಂತ ಸಹಿಸಿಕೊಂಡಾಳು ಈ ಸಂಕಷ್ಟವನ್ನು ? ಕೆಲವೊಮ್ಮೆ ಆಕೆಯೂ ಗಂಡನೊಡನೆ ಜಗಳವಾಡುತ್ತಿದ್ದಳು. ನೀನು ತವರಿಗೆ ಹೋಗು ಎಂದರೆ "ಹೋಗುವುದಿಲ್ಲ" ಎಂದು ಹಠ ಹಿಡಿಯುತ್ತಿದ್ದಳು. ಇದೇ ರೀತಿ ಸಾಗಿತ್ತು, ಇವರ ಜೀವನ ಪಥ.

ಅಂದು ಶನಿವಾರ ಡಿಸೆಂಬರ್ 20, 1986. ಅದು ದಾಕ್ಷಾಯಿಣಿಯ ಬಾಳಿಗೆ ಕರಾಳ ದಿನವಾಗಿತ್ತು. ಅಂದು ಕಲ್ಲೇಶಪ್ಪ ಇದ್ದಕ್ಕಿದ್ದಂತೆ ತನ್ನ ಮಾವನ ಮನೆಗೆ ಹೋಗಿ, "ನಿಮ್ಮ ಮಗಳನ್ನು ತವರಿಗೆ ಕರೆದುಕೊಂಡು ಹೋಗಿಬಿಡಿ. ನಾನು ಬೇರೆ ಮದುವೆಯಾಗಬೇಕು" ಎಂದು ಜಗಳವಾಡಿದ. ಆದರೆ ಮಾವ, "ನಾವು ಮದುವೆ ಮಾಡಿಕೊಟ್ಟಿರುವುದು ಮನೆಗೆ ಕರೆದುಕೊಂಡು ಬರುವುದಕ್ಕಲ್ಲ, ನೀವಿಬ್ಬರೂ ಸುಖವಾಗಿರಲು" ಎಂದು ಅಳಿಯನಿಗೆ ವಿಧವಿಧವಾಗಿ ಸಮಾಧಾನ ಮಾಡಿದರು. ಅಂದೇ ಸಂಜೆ, ಕಲ್ಲೇಶಪ್ಪ ಆಸಂದಿಗೆ ಹೊರಡುವ

ಮುನ್ನ ಮಾವನಿಗೆ "ನಿಮ್ಮನ್ನು ಹೇಗೆ ಕರೆಯಿಸಿಕೊಳ್ಳ ಬೇಕೆಂದು ನನಗೆ ಗೊತ್ತು" ಎಂದು ಹೇಳಿ ಹೊರಟಿದ್ದ ನ್ನಲಾಗಿದೆ.

ಮಾರನೆಯ ದಿನ ಭಾನುವಾರ ಬೆಳಗ್ಗೆ ದಾಕ್ಷಾಯಿ ಣಿಯ ತಂದೆತಾಯಿಯರಿಗೆ ಮಗಳು ಆತ್ಮಹತ್ಯೆ ಮಾಡಿ ಕೊಂಡಿದ್ದಾಳೆಂಬ ಸುದ್ದಿ ತಲುಪಿತು. ನಂಟರೆಲ್ಲ ಆಸಂದಿಗೆ ತಲುಪುವುದರಲ್ಲಿ ಶವಪರೀಕ್ಷೆ ಮುಗಿದಿದ್ದು ಚಿತೆ ಸಿದ್ಧವಾಗಿತ್ತು. ಪೊಲೀಸರು "ಆತ್ಮಹತ್ಯೆ" ಎಂದು ಪ್ರಕರಣ ದಾಖಲಿಸಿದ್ದರು. ಪೊಲೀಸರ ಸಮ್ಮುಖದಲ್ಲಿ ಶವಸಂಸ್ಕಾರ ನಡೆಯಿತು. "ದಾಕ್ಷಾಯಿಣಿಯ ಮೈ ಮೇಲೆ ಅನೇಕ ತರಹದ ಗಾಯಗಳಿದ್ದು ಮುಖವೆಲ್ಲಾ ರಕ್ತಮಯವಾಗಿತ್ತು. ಇದು ಪೂರ್ವನಿಯೋಜಿತ ಕೊಲೆ" ಎಂದು ದಾಕ್ಷಾಯಿಣಿಯ ತಂದೆ ಹೇಳುತ್ತಾರೆ.

"ದಾಕ್ಷಾಯಿಣಿ ನೀರಿರುವ ಹಳ್ಳದಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಳು ಎನ್ನಲಾಗಿದೆ. ಆದರೆ ಆ ಸಣ್ಣ ಗುಂಡಿಯಂತಿರುವ ಹಳ್ಳದಲ್ಲಿ ಚಿಕ್ಕಮಕ್ಕಳು ಬಿದ್ದರೂ ಸಾಯುವಷ್ಟು ನೀರಿರಲಿಲ್ಲ" ಎನ್ನುತ್ತಾರೆ ಅವರು.

ದಾಕ್ಷಾಯಿಣಿ ಲಿಂಗಾಯಿತ ಕೋಮಿಗೆ ಸೇರಿ ದವಳು. ಇವರಲ್ಲ ಹೆಣ ಹೂಳುವ ಪದ್ಧತಿ ಇದೆ. ಹೆಣವನ್ನು ಎಂದಿಗೂ ಸುಡುವುದಿಲ್ಲ. ಇಲ್ಲಿ ಹೆಣವನ್ನು ಸುಡಲಾಗಿದೆ.

ಇದು ಆತ್ಮಹತ್ಯೆಯಲ್ಲ, ಕೊಲೆ ಎಂದು ವಾದಿಸುವ ದಾಕ್ಷಾಯಿಣಿ ಮನೆಯವರು ನ್ಯಾಯದ ನಿರೀಕ್ಷೆಯಲ್ಲಿದ್ದಾರೆ.

ಪಿ. ಎಚ್ ಶಾಂತಾ

---

# ಸಮಾಜ ಮತ್ತು ಸಂಪ್ರದಾಯ

ಹೆಣ್ಣು ! !
ಸಂಪ್ರದಾಯದ ಸಂಕೋಲೆಗೆ
ಬಂಧಿಯಾಗಿ
ಇಲ್ಲಾ....
ಗಂಡಸರ ಕ್ಷಣಿಕ
ಕಾಮದ ಬೆಂಕಿಗೆ
ಬೂದಿಯಾಗಿ

ಬಾಳಿನ ಕಡಲೊಳಗೆ
ಏಳುತ ಮುಳುಗುತ
ಕನಸಲ್ಲೂ ದಡ ಮುಟ್ಟದೆ
ಹೆಜ್ಜೆ ಸಾಗದ ಹಾದಿಗೆ
ಸಮಾಜಕೆ ಅಂಜಿ
ಅರಿತೋ ಅರಿಯದೆಯೋ...
ಹೆಜ್ಜೆ ಇಟ್ಟಳು
ಮುಳ್ಳಿಗೆ.... ! !

ಸಾವು-ನೋವಿನ ಬದುಕಲಿ
ದಿನ ನಿತ್ಯ ಹೆಣವಾದಳು
ಹಣವಾದಳು...
ಪರರ ಸ್ವಾರ್ಥದ ಬದುಕಿಗೆ
ಭದ್ರ ಬುನಾದಿಯ
ಅಡಿಪಾಯಕೆ....ಹೆಣ್ಣು !
ಯುಗ-ಯುಗಾಂತರದಿಂದಲೂ
ಮಣ್ಣಾದಳು ;

ಹೆಣ್ಣನ್ನೆ ಮಣ್ಣು ಮಾಡಿ
ಮೆಟ್ಟಿ ತಲೆಯೆತ್ತಿ ನಿಂತಿವೆ
ಅಂದು...ಇಂದು...
"ಸಮಾಜ ಮತ್ತು ಸಂಪ್ರದಾಯ..."

ರತ್ನಾತನಯ ಮಂಜು

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮೊದಬಾರಿಗೆ ಬರೆಯಲು ಯತ್ನಿಸುವ ಲೇಖಕಿ-ಲೇಖಕರಿಗಾಗಿ "ಮೌನ ಮಾತಾದಾಗ" ಅಂಕಣವಿದೆ. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದತಿ, ವರದಕ್ಷಿಣೆ, ಅಸಮಾನ ವೇತನ ಮುಂತಾದ ವಿಷಯುಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗೂ ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿ ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಸಲಾಗುವುದು.

—ಸಂ. ಮಂಡಳಿ

ಈತ ಹೈಸ್ಕೂಲು ಜವಾನ. ಈಗಾಗಲೇ ಇಪ್ಪತ್ತು ವರ್ಷಗಳಷ್ಟು ದುಡಿದಿದ್ದಾನೆ. ಹಾಗಾಗಿ ಅವನಿಗೆ ಸಂಬಳ ಕೂಡ ಸಾಕಷ್ಟು ಬರುತ್ತದೆ. ಮಡಿವಾಳ ಜಾತಿಗೆ ಸೇರಿದ ಅವನಿಗೆ ಹೆಂಡತಿ, ಮೂರು–ನಾಲ್ಕು ಹೆಣ್ಣುಮಕ್ಕಳೂ, ಒಬ್ಬನೇ ಮಗ ಇದ್ದಾರೆ. ಕೆಳವರ್ಗದ ಈತ ಸಂಸಾರದ ಜವಾಬ್ದಾರಿ, ಮಕ್ಕಳ ಭವಿಷ್ಯದ ಚಿಂತೆ ಬಗ್ಗೆ ಕಾತುರನಾಗಿರಬಹುದು ಎಂದು ಯಾರಿಗಾದರೂ ಸಹಜವಾಗಿ ಅನ್ನಿಸಬಹುದು. ಏಕೆಂದರೆ ಬರುವ ಸಂಬಳದಲ್ಲಿ ಹೊಟ್ಟೆ-ಬಟ್ಟೆಗೇನು ಪರದಾಡಬೇಕಾಗಿಲ್ಲ. ಆದರೆ ವಾಸ್ತವಿಕತೆಯೇ ಬೇರೆ. ನಮಗೆ ಅನ್ನಿಸಿದ ರೀತಿ ಆವನು ಬದುಕಿದ್ದರೆ ಸಾಕಷ್ಟು ನೆಮ್ಮದಿಯ ಜೀವನ ಅವನದಾಗುವ ಸಾಧ್ಯತೆಯಿತ್ತು.

ಆದರೆ ಅವನೊಬ್ಬ ಕುಡುಕ, ಬರುವ ಸಂಬಳ ಅವನಿಗೆ ಕುಡಿಯಲು, ಇಸ್ಪೀಟಾಡಲು ಸಾಲುವುದೇ ಇಲ್ಲ. ಮನೆಗೆ ಅವನಿಂದ ಒಂದು ಪೈಸೆ ಕೂಡ ತಲುಪುವುದಿಲ್ಲ. ಹೆಂಡತಿ-ಮಕ್ಕಳ ಯೋಚನೆಯೇ ಅವನಿಗಿಲ್ಲ. ಸರಳವಾಗಿ, ಸುಲಲಿತವಾಗಿ ಸಾಗಬೇಕಾದ ಬದುಕು ಅವನ ದುಶ್ಚಟಗಳಿಂದಾಗಿ, ವಿಚಾರಹೀನ ವ್ಯಕ್ತಿತ್ವದಿಂದಾಗಿ ಗೊಂದಲಮಯ.

ಹಾಗೆಂದು ಅವನ ಸಂಸಾರ ಈತನನ್ನೇ ನಂಬಿಲ್ಲ. ಗಂಡನ ಬಗ್ಗೆ ಪೂರ್ಣ ವಿಶ್ವಾಸ ಕಳೆದುಕೊಂಡ ಹೆಂಡತಿ ತಾನು ತನ್ನ ಅನ್ನವನ್ನು ದುಡಿದು ತಿನ್ನಬಲ್ಲೆ ಎಂಬ ಛಲದವಳು. ಗಂಡನ ದುಶ್ಚಟಕ್ಕೆ ಎಂದೂ ಅಂಕುಶ ಹಾಕಲಾರೆ ಎಂಬ ತೀರ್ಮಾನಕ್ಕೆ ಬಂದವಳು. ದುಡಿದು ಸಾಕಲಾರದ ಗಂಡ ಅಷ್ಟೇ ಅಲ್ಲ; ತನ್ನ ಚಾರಿತ್ರ್ಯದ ಬಗ್ಗೆಯೇ ಅನುಮಾನ ಪಡುವ ಗಂಡ. ಇಂತಹವನು ಇದ್ದರೂ ಒಂದೇ ಸತ್ತರೂ ಒಂದೇ. ಗಂಡ ಬದುಕಿದ್ದರೂ ಏನು ಪ್ರಯೋಜನ ? ಅವನು ತನ್ನ ಪಾಲಿಗೆ ಸತ್ತ ಲೆಕ್ಕವೇ ! ಎಂದು ತಾಳಿ ಹರಿದೆಸೆದು ಬದುಕುವವಳು. ಇನ್ನು ಮಕ್ಕಳು ಸಂಜೆತನಕ ಹತ್ತಾರು ಮನೆಗಳಲ್ಲಿ ಪಾತ್ರೆ ತಿಕ್ಕಿ, ಬಟ್ಟೆ ಒಗೆದು ತಮ್ಮ ಪಾಲಿನ ಅನ್ನಕ್ಕೆ ದಾರಿ ಮಾಡಿಕೊಂಡವರು. ಅಪ್ಪನ ಆಧಾರವನ್ನು ಎಂದೋ ಮರೆತು, ತಮ್ಮ ಜೀವನಕ್ಕೆ ತಾವೇ ಜವಾಬ್ದಾರರು ಎಂದು ಅರಿತವರು.

ಹೆಂಡತಿ–ಮಕ್ಕಳು ದುಡಿದಿದ್ದನ್ನು ತಿನ್ನುತ್ತಾ, ಹಾಲುಂಡಿಯಾಗಿ ಸಂಸಾರದಲ್ಲಿದ್ದರೂ ಸಹ ಈತ ಮನೆಯ ಯಜಮಾನ ! ಹಾಗೆಯೇ ಹಾಲುಂಡಿಯಾಗಿ ಇದ್ದಿದ್ದರೆ ಎಷ್ಟೋ ಸುಖವಾಗಿರುತ್ತಿತ್ತು ಈ ಸಂಸಾರ. ಆದರೆ ಈತ ಗಂಡಸಲ್ಲವೆ ? ಹಾಗಾಗಿ ಕುಡಿದು ಹೆಂಡತಿಗೆ ಹೊಡೆದು–ಬಡಿದು ಗಲಾಟೆ ಮಾಡದಿದ್ದರೆ ಹೇಗೆ ? ಪರಿಸ್ಥಿತಿಗೆ ಒಗ್ಗಿಕೊಂಡು ಬದುಕಲೇಬೇಕಾದು. ಅನಿವಾರ್ಯ. ದೂಡಿದರೂ ಹೊರ ಹೋಗದ ಗಂಡ ತಾನೇ ಬೇರೆ ಇರಬೇಕೆಂದರೆ ಹೊಸದಾಗಿ ಮನೆ ರೂಪಿಸಿಕೊಳ್ಳಲಾರದ. ಬಡತನ ಮನೆ ಗಂಡನಿಗೆ ಸೇರಿದ್ದಾದ್ದರಿಂದ ಅವನ ಹಂಗು ಅದೊಂದೇ. ಸಮಾಜದಲ್ಲಿ ಗಂಡ ಬಿಟ್ಟವಳಾಗಿ ಬದುಕಬೇಕಲ್ಲ ! ಈ ಎಲ್ಲ ಅಂಶಗಳು ತಾಳಿ ಕಿತ್ತೆಸೆದರೂ ಗಂಡನೊಂದಿಗೆ ಬದುಕಲೇಬೇಕಾದ ಅನಿವಾರ್ಯತೆಯನ್ನು ಬದುಕಿಗೆ ನೀಡಿವೆ. ದುಡಿದು ತಿನ್ನುವುದು, ಗಂಡನ ದುಶ್ಚಟಗಳನ್ನು ಸಹಿಸಿಕೊಳ್ಳುವುದು. ಹೇಗೊ...ಇದು ಒಂದೂ ಬದುಕು ಸಾಗುತ್ತಿದೆ.... ಸಾಗಲೇ ಬೇಕಾದ ಅನಿವಾರ್ಯತೆಗಾಗಿ.

—ಪ್ರೇಮಾವತಿ

ಹಿಂದೂಸ್ತಾನವೆಂದು ಕರೆಯಲ್ಪಟ್ಟ ಈ ನಮ್ಮ ದೇಶವನ್ನು ಇತರ ದೇಶಗಳಿಗೆ ಹೋಲಿಸಿದರೆ ನಮ್ಮದಾದ ಈ ಒಂದು ಸಂಸ್ಕೃತಿ ಇತರ ಮತ್ತಾವುದೇ ದೇಶದಲ್ಲೂ ಕಂಡುಬರುವುದಿಲ್ಲ. ನಮ್ಮ ವೇದ, ಉಪನಿಷತ್ ಪುರಾಣಗ್ರಂಥಗಳಿಂದಾಯ್ದ ಹಲವಾರು ಕಟ್ಟುಪಾಡುಗಳು, ಸ್ತ್ರೀಸಮಾಜವನ್ನು ಅಧೋಗತಿಗಿಳಿಸುವಲ್ಲಿ ಯಶಸ್ವಿಯಾಗಿದೆ. ನಮ್ಮ ಸಮಾಜ ರಚಿತವಾಗಿರುವುದನ್ನು ನೋಡಿದರೆ ನಮ್ಮ ಧರ್ಮ ಅಥವಾ ನಮ್ಮ ಜನಾಂಗ ಉಳಿಯಬೇಕಾದರೆ ಕೇವಲ ಸ್ತ್ರೀಯರ ಕರ್ಮದಾಚರಣೆಗಳಷ್ಟೆ ಸಾಕು; ಪುರುಷರ ಅನುಷ್ಠಾನ ಬೇಕಾಗಿಲ್ಲ ಎನ್ನುವಂತೆ ನಮ್ಮ ಸಮಾಜದ ಹೊರನೋಟ ತಿಳಿಸುತ್ತದೆ. ಬಹುಶಃ ಈ ಪರಿಸ್ಥಿತಿಯಲ್ಲಿಯೇ ಹೆಣ್ಣಿಗೆ ತಾನು ಗಳಿಸಿದ ವಿಶೇಷ ಸ್ಥಾನ ಮಾನಗಳು ಲಭ್ಯವಾದದ್ದು.

ಧಾರ್ಮಿಕವಾಗಿ ನಾವು ಸ್ತ್ರೀಯರನ್ನು ಅಲ್ಲಲ್ಲಿ ಮೇಲ್ಮಟ್ಟದಲ್ಲಿ ಗುರುತಿಸಿದರೂ ಆಕೆ ಅರಮನೆಯ ದಾಸಿಯಾಗಿದ್ದಾಳೆ. ತಾನು ಅರಮನೆಯಲ್ಲಿದ್ದೇನೆಂಬ ಹೆಮ್ಮೆ ಮಾತ್ರ ಅವಳಿಗೆ ಇನ್ನು ತನ್ನ ಸ್ಥಾನಮಾನಗಳನ್ನು ಸ್ವಲ್ಪಮಟ್ಟಿಗೆ ತಾನೇ ಇಳಿಸಿಕೊಂಡಿದ್ದಾಳೆ. ಹೀಗಾಗಲು ಕಾರಣ ಆಕೆಯ ಮೃದು ಮನಸ್ಸಿಗೆ ಒತ್ತಡ ಹೇರಿ ಒಂದು ರೀತಿಯ ಕಟ್ಟುಪಾಡಿನೊಳಗೆ ಆಕೆಯ ಮನಸ್ಸನ್ನು ನಿರ್ಬಂಧಪಡಿಸಿಟ್ಟಿದೆ ಸಮಾಜ. ಆದರೆ ಇದರಿಂದ ಬಿಡಿಸಿಕೊಂಡು ಎಚ್ಚೆತ್ತರೇನೇ ಆಕೆಗೆ ಮುಕ್ತಿ ಸಾಧ್ಯ.

ಇನ್ನು ಕೆಲವರು ಮುಂದುವರೆಯುತ್ತಿರುವ ಈ ನಮ್ಮ ದೇಶದಲ್ಲೀಗ ಸ್ತ್ರೀಸಮಾಜ ಶೋಷಣೆಗೊಳಗಾಗದೆ ಸ್ವತಂತ್ರ ರೂಪವನ್ನು ಹೊಂದುತ್ತಿದೆ ಎಂದು ವಾದಿಸುತ್ತಾರೆ. ಆದರೆ ನಾಗರೀಕತೆಯ ಸೋಂಕಿನಲ್ಲಿ, ನಾಗರೀಕತೆಯ ಮುಖವಾಡ ಧರಿಸಿದ ತರುಣರು ಮಾನವೀಯತೆಯನ್ನು ಮಾರಿಕೊಂಡು ಹೆಣ್ಣನ್ನು ಕೇವಲ ತನ್ನ ವಿಲಾಸಸಾಮಗ್ರಿಯಾಗಿ ಬಳಸುತ್ತಿರುವುದು ಅವಾಸ್ತವವೇನಲ್ಲ. (ಈ ಸಂದರ್ಭದಲ್ಲಿ ಮನುಷ್ಯ ಮನುಷ್ಯತ್ವವನ್ನೇ ನಾಚಿಸುವಷ್ಟರ ಮಟ್ಟಿಗೆ ಬಂದಿದ್ದಾನೆ) ಜೊತೆಗೆ ಹೆಣ್ಣು ಹೇಡಿ, ಅಬಲೆ ಎಂಬ ನುಡಿ. ಗತ ಕಾಲದ ವನಿತೆಯರ ಪಾವಿತ್ರ್ಯವನ್ನು, ಗಾಂಭೀರ್ಯವನ್ನು, ಆಕೆಯ ನಡೆನುಡಿಗಳನ್ನು ಹೊಗಳುತ್ತಾ ಕೋಮಲೆ ಎಂದು ಕರೆದ ಗಂಡೇ ಆಕೆಯನ್ನು ಗೋಳಾಡಿಸುವನು. ಆದರೆ ಹೆಣ್ಣಿನ ಹೇಡಿತನಕ್ಕೆ ಕಾರಣರಾರು? ಮಾನವನು ತನ್ನ ಸಾಧನೆಯಲ್ಲಿ ಪ್ರಕೃತಿಯ ದೋಷವನ್ನು ಕೆಲವು ಸಂದರ್ಭದಲ್ಲಿ ಸೂಚಿಸುವಂತೆ ಮಾನವಂತರಾಗಿ, ಧೈರ್ಯ ಸಾಹಸಿಗಳಾಗಿ ಬಾಳಲು ಹೆಣ್ಣು ಗಂಡನ್ನೇಕೆ ಪ್ರಕೃತಿಯ ಸ್ಥಾನದಲ್ಲಿಡಬಾರದು ? ಅಧಿಕಾರ, ದೇಹಶಕ್ತಿ ಇದ್ದರೆ ಅದನ್ನು ಮಾನವತ್ವದಿಂದ ಏಕೆ ಉಪಯೋಗಿಸಬಾರದು ? ಶಕ್ತಿವಂತರು ಬಲಹೀನರ ಮೇಲೆ ಮೃಗಗಳಂತೆ ನಡೆದುಕೊಂಡು ಅನ್ಯಾಯ, ಅನೀತಿ, ದೌರ್ಜನ್ಯ, ವ್ಯಭಿಚಾರಗಳನ್ನು ನಡೆಸುತ್ತಲೇ ಇದ್ದು, ಹೆಣ್ಣನ್ನು ಪಾಪರೂಪಕ್ಕೆ (?) ತಳ್ಳುತ್ತಿರುವ ನಾಗರೀಕರು ಹೆಣ್ಣನ್ನು ಹೇಡಿಯೆಂದು ಕರೆದುಕೊಳ್ಳುತ್ತಾ ಅದರ ವಿರುದ್ಧಾರ್ಥದ ಪದವನ್ನು ತಾನಿಟ್ಟುಕೊಂಡಿರುವುದು ವಿಷಾದಕರ–ಇದೊಂದು ಶೋಚನೀಯ ಸಂಗತಿ ಹಾಗೂ ಹೆಣ್ಣಿನ ದೌರ್ಭಾಗ್ಯ.

ಉತ್ತಮ ಶಿಕ್ಷಣ ಪಡೆದಂತಹ ಯಾವುದೇ ಸ್ಥಾನಮಾನವನ್ನು ಪಡೆದಂತಹ ಸ್ತ್ರೀಯರಾದರೂ ತನ್ನ ಮಾರ್ಗದಲ್ಲಿ ಗುರಿ ಸಾಧನೆಯ ಪಥದಲ್ಲಿ ಸಾಗಬೇಕಾದರೆ ಆಕೆಯ ಹಿಂಬಾಲಕರಾಗಿ ಆಕೆಯ ಹಿತೈಷಿಗಳಿರಬೇಕು. ಸ್ವತಂತ್ರವಾಗಿ ಗುರಿಸಾಧಿಸುವ ಮಹಿಳೆಯಿದ್ದರೂ ಅವರನ್ನು ಕತ್ತರಿಸಲು ಕತ್ತರಿಯಾಗಿ ಸಮಾಜ ಎದ್ದು ನಿಂತಿರುತ್ತದೆ. ಈ ಸಂದರ್ಭದಲ್ಲಿಯೇ ಹೆಣ್ಣು 'ಹೇಡಿ' ಎಂಬ ಬಿರುದು ಧರಿಸಿರುವುದು.

ಆದರೆ ಸ್ತ್ರೀ ತನ್ನ ಕುತ್ತಿಗೆಗೆ ಉರುಳಾಗಿರುವ ಸಮಾಜ ಬಂಧನದಿಂದ ಹೊರಬರಬೇಕು, ತನ್ನ ಈ ಕೊಳಕು ಜೀವನದ ಕೆಸರಿನ ಮೇಲೆ ಸೇತುವೆ ಕಟ್ಟಬೇಕು. ಸ್ತ್ರೀಸ್ವಾತಂತ್ರ್ಯ ಚಳುವಳಿಯನ್ನು ಗುರುತರವಾದ ಶ್ರಮದಿಂದ ಸಾಧಿಸಬೇಕು. ಯಾವ ಕಾಲಕ್ಕೊ ಯಾವ ಸಮಾಜಕ್ಕೋ ಮನು ಮುಂತಾದವರು ಬರೆದಿದ್ದ ಶಾಸನಗಳು ಇಂದಿಗೂ ಅವಳನ್ನಾಳುವುದನ್ನು ಅಲ್ಲಗಳೆಯಬೇಕು. ಇದು ಇಡೀ ಸ್ತ್ರೀಕುಲಕ್ಕೆ ಊದಿಹೇಳುವ ಕಳಕಳಿಯ ಕಹಳೆ.

**ಆರೋಗ್ಯ**

# ದುರಪಯೋಗವಾಗುತ್ತಿರುವ ವೈದ್ಯಕೀಯ ತಾಂತ್ರಿಕತೆಗಳು

ಸ್ತ್ರೀಯರಿಗೆ ಸರಿಸಮಾನತೆಯನ್ನು ಕಲ್ಪಿಸಿರುವೆವು, ಸ್ತ್ರೀಯರ ಸರ್ವತೋಮುಖ ಬೆಳವಣಿಗೆಗೆ ಸಹಾಯಕ ವಾಗಿರುವೆವೆಂದು ಸಾರುತ್ತಿರುವ ಇಂದಿನ ನಮ್ಮ ನೂತನ ಸಮಾಜದಲ್ಲಿ ಹೆಣ್ಣಿಗೆ ಅತೀ ಮುಂದುವರಿದ, ಕ್ಲಿಷ್ಟ ವಾದ ತಾಂತ್ರಿಕತೆಗಳನ್ನೊಳಗೊಂಡ ವೈದ್ಯಕೀಯ ವಿಜ್ಞಾನದಿಂದಲೂ ಘೋರ ಅನ್ಯಾಯ ಅಸಮಾನತೆಗಳು ಆಗುತ್ತಿವೆಯೆಂದರೆ ನಿಜಕ್ಕೂ ಮೇಲಿನ ಘೋಷಣೆ ಗಳನ್ನು ಬರೀ ಪೊಳ್ಳುಗಳೆಂದು ಪರಿಗಣಿಸಲೇಬೇಕಾದದ್ದು ಅತ್ಯಂತ ಶೋಚನೀಯ. ಆದಿಕಾಲದಿಂದಲೂ ನಮ್ಮ ಸಮಾಜ ಹೆಣ್ಣಿಗೆ ಭೂಮಿ ದೇವತೆ, ತಾಯಿಯೆಂಬ ಪೂಜ್ಯ ಸ್ಥಾನವನ್ನು ಕೊಟ್ಟಿದೆಯಾದರೂ ಬರಬರುತ್ತ ಈ ಭಾವನೆ ಬಯಲಾಗಿ ಹೆಣ್ಣಿನ ಜನನವನ್ನೇ ದ್ವೇಷಿಸಲು ಆರಂಭಿಸಿದೆ. ಈ ದ್ವೇಷ ಅಷ್ಟೊಂದು ಬಲವಾಗಿದೆ ಯೆಂದರೆ ಅದಕ್ಕಾಗಿ ನಾನಾ ತರಹದ ವ್ಯವಸ್ಥೆಯನ್ನು ನಮ್ಮ ವಿಜ್ಞಾನವೇ ಕಂಡುಹಿಡಿದುದು, ಅದರಲ್ಲಿ ಭ್ರೂಣ ಪರೀಕ್ಷೆಯು ತುಂಬಾ ಪ್ರಚಲಿತವಿರುವ ಒಂದು ವಿಧಾನ.

ನಮ್ಮ ಭಾರತ ದೇಶವು ಇದಕ್ಕೆ ಹೊರತಾಗಿಲ್ಲ. ಈಗ ನಮ್ಮ ದೇಶದಲ್ಲಿ ಪ್ರಚಲಿತವಿರುವ ಭ್ರೂಣ ಪರೀಕ್ಷೆಯ ತಾಂತ್ರಿಕತೆಗಳನ್ನು ಬಳಸಿಕೊಂಡು ಹೆಣ್ಣೋ ಅಥವಾ ಗಂಡೋ ? ಎಂಬುದನ್ನು ತಿಳಿದು, ಹೆಣ್ಣಾದರೆ ಆ ಬ್ರೂಣವನ್ನೇ ಗರ್ಭಪಾತ ಮುಖಾಂತರ ನಾಶ ಮಾಡುತ್ತಿರುವ ಕ್ರಿಯೆ ಅತಿ ಸಾಮಾನ್ಯವಾಗಿದೆ. ದೇಶದ ಅತಿ ದೊಡ್ಡ ನಗರಗಳಲ್ಲೆಲ್ಲಾ ಈ ಸೌಲಭ್ಯಗಳು ದೊರೆಯುತ್ತವೆ. Amniocentesis, Chorionic Uillibiopsy, Super Sponography ಈ ರೀತಿಯ ತಾಂತ್ರಿಕತೆಗಳನ್ನು ಭ್ರೂಣದ ಲಿಂಗ ಭೇದ ಕಂಡು ಹಿಡಿಯಲು ಮಾತ್ರ ದುರುಪಯೋಗ ಮಾಡಿಕೊಳ್ಳು ತ್ತಿರುವರು. ಕೆಲವೊಂದು ಸಂಘ ಸಂಸ್ಥೆಗಳು, ಖಾಸಗಿ ಆಸ್ಪತ್ರೆಗಳು ಇಂತಹ ಸೌಲಭ್ಯಗಳನ್ನು ಉಪಯೋಗಿಸಿ ಕೊಂಡು ಹೆಣ್ಣು ಭ್ರೂಣವಾದರೆ ಗರ್ಭಪಾತಮಾಡಿ ತೆಗೆಯುತ್ತಿರುವರು. ಕೆಲವೊಂದು ಕಡೆ ಸರ್ಕಾರಿ ಆಸ್ಪತ್ರೆ ಯಲ್ಲಿ ಕೂಡ ಈ ಕಾರ್ಯ ನಡೆಯುತ್ತಿದೆ.

ಬಾಂಬೆಯಂತಹ ನಗರದಲ್ಲಿ ಒಂದೊಂದು ಬೀದಿ ಯಲ್ಲಿಯೇ ಎರಡು ಅಥವಾ ಮೂರು ಇಂತಹ ಕೇಂದ್ರ ಗಳು ಇರುವವು. ಇಂತಹ ಒಂದೊಂದು ಕೇಂದ್ರದಲ್ಲಿ ಕಡಿಮೆಯೆಂದರೆ ದಿನಕ್ಕೆ 8–10 ಜನರ ತಪಾಸಣೆ ಮಾಡಿ ಗರ್ಭಪಾತ ನಡೆಸುವರು. ಈ ತಪಾಸಣೆಗಾಗಿಯೇ ಒಂದು ತಿಂಗಳು ಮೊದಲೇ ಜನರು ತಮ್ಮ ಹೆಸರನ್ನು ನೊಂದಾಯಿಸುವರು. ಅಷ್ಟೊಂದು ಜನಪ್ರಿಯತೆ ಗಳಿಸಿವೆ ಈ ಕೇಂದ್ರಗಳು.

ಭಾರತದ ಮುಖ್ಯ ನಗರಗಳಾದ ಬಾಂಬೆ, ಡೆಲ್ಲಿ ಚಂಡೀಗಡ, ಅಮೃತಸರ, ಬರೋಡ, ಅಹಮದಾಬಾದ್

ಸುಮಾ

ಕಾಶ್ಮೀರ ಮುಂತಾದ ಕಡೆಗಳಲ್ಲೆಲ್ಲಾ ಈ ಸೌಲಭ್ಯಗಳು ಅತೀ ಸುಲಭವಾಗಿ ದೊರೆಯುತ್ತವೆ. 1976ರಿಂದ 1983ರ ಅವಧಿಯಲ್ಲಿ 78000 ಹೆಣ್ಣು ಭ್ರೂಣಗಳನ್ನು ಗರ್ಭಪಾತ ಮಾಡಿ ನಾಶಮಾಡಿರುವ ವಿಷಯವನ್ನು 'India Today ಪತ್ರಿಕೆ ಪ್ರಕಟಿಸಿದೆ.

ಕೆಲವು ಪರರಾಷ್ಟ್ರಗಳಲ್ಲಿ ಸರ್ಕಾರಗಳು ಇಂತಹ ಕೇಂದ್ರಗಳ ಮೇಲೆ ಹತೋಟಿಯನ್ನು ಇಟ್ಟುಕೊಂಡಿದೆ ಯಲ್ಲದೆ ಇದಕ್ಕೆ ತಗಲುವ ಖರ್ಚಿನ ಮಿತಿ ಅತಿ ಹೆಚ್ಚಿನ ದಾಗಿದೆ. ಆದರೆ ನಮ್ಮ ಭಾರತದಲ್ಲಿ ಕೇವಲ ಅತಿ ಕಡಿಮೆ ಖರ್ಚಿನಲ್ಲಿ ಅಂದರೆ ರೂ 80ರಿಂದ ಹಿಡಿದು ರೂ. 500 ಗಳಲ್ಲಿ ಕೆಳವರ್ಗದವರಿಗೂ ಸಿಗುವಂತಾಗಿದೆ. ಹೀಗಾಗಿ ಬರೀ ಶ್ರೀಮಂತರಷ್ಟೇ ಅಲ್ಲ ಎಲ್ಲಾ ವರ್ಗ ದವರು ಈ ಸೌಲಭ್ಯದಿಂದ ಹೆಣ್ಣು ಭ್ರೂಣ ಹತ್ಯೆಯಲ್ಲಿ ಶಾಮೀಲಾಗಿದ್ದಾರೆ.

ಹೆಣ್ಣು ಹುಟ್ಟಿದರೆ ಅವಳ ಬೆಳವಣಿಗೆಗೆ, ವಿದ್ಯಾ ಭ್ಯಾಸಕ್ಕೆ ಸಾಕಷ್ಟು ಖರ್ಚು ಮಾಡಿ, ಮತ್ತೆ ವರದಕ್ಷಿಣೆ ಕೊಟ್ಟು ಮದುವೆ ಮಾಡಿ ಬೇರೆ ಮನೆಗೆ ಕಳಿಸಬೇಕು ಹೀಗಾಗಿ ಹೆಣ್ಣು ಬರೀ ಖರ್ಚಿನ ಬಾಬತ್ತು, ಹೊರತು ಲಾಭಗಳಿಸುವ ಮಾಧ್ಯಮವಲ್ಲವೆಂದು ಈ ರೀತಿಯ

ಕೆಳದರ್ಜೆಯ ಸೌಲಭ್ಯಗಳ ಸಹಾಯದಿಂದ ಕನಿಷ್ಠ ಖರ್ಚಿನಲ್ಲಿ ಹೆಣ್ಣು ಭ್ರೂಣದ ಹತ್ಯೆಯೇ ಸುಲಭೋಪಾಯವೆಂದು ಪರಿಗಣಿಸುವುದು ನಮ್ಮ ಈ ಇಂದಿನ ಸಮಾಜ, ಇದೊಂದು ಹೇಡಿಕರ ಕೆಲಸವೇ ಸರಿ !

ಕೆಲವೇ ಬಂಡವಾಳಶಾಹಿಗಳು ಹಣಗಳಿಸಬೇಕೆಂಬ ದುರಾಶೆಯನ್ನಿಟ್ಟುಕೊಂಡು ಯಾವುದಕ್ಕೂ ಹೇಸದಂತಹ ವೈದ್ಯರಿಂದ ಇಂತಹ ಭ್ರೂಣ ಹತ್ಯೆ ನಡೆಸುತ್ತಿವೆ.

ಈ ಅಮ್ನಿಯೊಸಿಂಥಿಸಿಸ್ ತಾಂತ್ರಿಕತೆಯನ್ನು ಸ್ತ್ರೀ ಗರ್ಭಿಣಿಯಾಗಿ 16ನೇ ವಾರದಲ್ಲಿ ಪರೀಕ್ಷೆ ಮಾಡುವರು. ಇದಕ್ಕೆ ಗರ್ಭಾಶಯದಲ್ಲಿರುವ ದ್ರವವನ್ನು ವಿಶೇಷ ರೀತಿಯ ಸೂಜಿಯಿಂದ 15ml ನಿಂದ 20ml ದ್ರವವನ್ನು ತೆಗೆದುಕೊಳ್ಳುವರು. ಈ ದ್ರವಕ್ಕೆ

> ಬಾಂಬೆಯಂತಹ ನಗರದಲ್ಲಿ ಒಂದೊಂದು ಬೀದಿಯಲ್ಲಿ ಎರಡು ಅಥವಾ ಮೂರು ಅಮ್ನಿಯೋಸಿಂಸಿಥಿಸ್ ಪರೀಕ್ಷಾ ಸೌಲಭ್ಯವಿರುವ ಕೇಂದ್ರಗಳಿವೆ. ಇಂತಹ ಒಂದೊಂದು ಕೇಂದ್ರದಲ್ಲೂ ಕಡಿಮೆಯೆಂದರೆ ದಿನಕ್ಕೆ 8-10 ಜನರ ತಪಾಸಣೆ ಮಾಡಿ ಗರ್ಭಪಾತ ನಡೆಸುವರು.

ಅಮ್ನಿಯೋಟಿಕ್ (Amniotic) ದ್ರವವೆಂದು ಕರೆಯುವರು. ಈ ದ್ರವದಿಂದ ಭ್ರೂಣ ಕೋಶವನ್ನು ಬೇರ್ಪಡಿಸಿ ಕ್ರೋಮೋಸೋಮಲ್ (Chromosomal) ಪ್ರಯೋಗಕ್ಕೆ ಒಳಪಡಿಸುವರು. ಈ ಪರೀಕ್ಷೆಯಿಂದ ಮುಂದೆ ಮಗುವಿನಲ್ಲಿರಬಹುದಾದ ನರ ದೌರ್ಬಲ್ಯಗಳು, ಮಾಂಸ ಖಂಡಗಳ ಬೆಳವಣಿಗೆ, Rh-factor ನ ದೋಷಗಳು, ರಕ್ತ ದೋಷಗಳು, ಇಂತಹ ಅಸಹಜ (abnormal) ಬೆಳವಣಿಗೆಗಳನ್ನು ಕಂಡು ಹಿಡಿಯಲು ಸಹಾಯಕವಾಗುತ್ತದೆ. ಈ ರೀತಿಯ ಪ್ರಯೋಗವನ್ನು 40 ವರ್ಷ ವಯಸ್ಸಿನ ನಂತರ ಗರ್ಭಿಣಿಯರಾದ ಸ್ತ್ರೀಯರಿಗೆ ಒಳಪಡಿಸುವರು, ಏಕೆಂದರೆ ಅಂತಹ ವಯಸ್ಸಿನ ಗರ್ಭಿಣಿಯರಲ್ಲಿ ಮಾತ್ರ ಈ ರೀತಿ ಮಗುವಿನ ಅಸಹಜ ಬೆಳವಣಿಗೆಯ ಸಾಧ್ಯತೆಗಳಿರುತ್ತವೆ. ಆದರೆ ಈಗ ನಮ್ಮಲ್ಲಿ ಭ್ರೂಣದ ಲಿಂಗ ಕಂಡುಹಿಡಿಯಲು ಮಾತ್ರ ಬಹಳವಾಗಿ ಈ ಅಮ್ನಿಯೊಸಿಂಥಿಸಿಸ್ ಬಳಸುತ್ತಿರುವರು.

ಇಂತಹ ತಾಂತ್ರಿಕ ಪರೀಕ್ಷೆಗೆ ಒಳಪಟ್ಟವರಲ್ಲಿಯ ಗರ್ಭಾಶಯಕ್ಕೆ ಬಹಳ ತೊಂದರೆಯುಂಟಾಗುತ್ತದೆ. ಹೀಗೆ ಪರೀಕ್ಷೆಗೆ ಒಳಪಡಿಸುವುದರಿಂದ ಸ್ವಯಂ ಅನಿಯಂತ್ರಿತ ಗರ್ಭಪಾತವಾಗುವ ಸಂಭವ ಜಾಸ್ತಿ. ಅಪೂರ್ಣ ಬೆಳವಣಿಗೆಯ ಮಕ್ಕಳು ಜನಿಸುತ್ತವೆ. ಸೊಂಟದ ಕೀಲು ತಪ್ಪುವ ಸಂಭವವಿರುತ್ತದೆ. ರಕ್ತ ಹೀನತೆ ಯಂತೂ ಅತಿ ಸಾಮಾನ್ಯವಾಗಿ ಬರುತ್ತದೆ. ಮಗುವಿನ ಮೇಲೆ ಸೂಜಿ ಚುಚ್ಚಿದ್ದು ಶಾಶ್ವತವಾದ ಕಲೆ ಉಂಟಾಗುತ್ತದೆ.

ಈ ರೀತಿಯ ಪರೀಕ್ಷೆಗಳು ನಮ್ಮ ದೇಶದ ದೊಡ್ಡ ನಗರಗಳಲ್ಲಿ ಮಾತ್ರವಿರುವುದರಿಂದ, 16ರ ವಾರದ ನಂತರ ಈ ಪರೀಕ್ಷೆಗೆ ಒಳಪಡಿಸುವುದರಿಂದ ಇದರ ಫಲಿತಾಂಶ ಅವರಿಗೆ ದೊರೆತು ಗರ್ಭಪಾತ ಮಾಡಿಸಬೇಕೆಂಬ ನಿರ್ಧಾರ ತೆಗೆದುಕೊಳ್ಳುವುದರಲ್ಲಿಯೇ 18 ವಾರದ ಭ್ರೂಣ ಬೆಳವಣಿಗೆಯಾಗಿರುತ್ತದೆ. ಈ ಹಂತದಲ್ಲಿ ಗರ್ಭಪಾತ ಮಾಡಿಸುವುದು ಸ್ತ್ರೀಯರಿಗೆ ಬಹಳ ಅಪಾಯಕಾರಿಯಾಗಿರುತ್ತದೆ. ಆದ್ದರಿಂದ ಈ ರೀತಿಯ ಲಿಂಗಭೇದ ಕಂಡು ಹಿಡಿದು ಹೆಣ್ಣು ಭ್ರೂಣವನ್ನು ಗರ್ಭಪಾತ ಮಾಡುತ್ತಿರುವಲ್ಲಿ ಸಂಘಸಂಸ್ಥೆಗಳನ್ನು, ಖಾಸಗಿ ಆಸ್ಪತ್ರೆಗಳನ್ನು ಸರ್ಕಾರವೂ ಸಂಪೂರ್ಣವಾಗಿ ಬಹಿಷ್ಕರಿಸಬೇಕು.

ಪ್ರಪಂಚದಲ್ಲಿಯೇ ಭಾರತ ಈ ತಾಂತ್ರಿಕತೆಯನ್ನು ಹೆಚ್ಚು ದುರುಪಯೋಗ ಮಾಡುತ್ತಿರುವ ಮೂರನೇ ರಾಷ್ಟ್ರವಾಗಿದೆ. ಪಾಕಿಸ್ತಾನ್, ಇರಾನ್ ಮತ್ತು ಭಾರತದಲ್ಲಿ, ಮಾತ್ರ ಈ ತಾಂತ್ರಿಕತೆಯ ದುರುಪಯೋಗ ಪರಮಾವಧಿಗೆ ತಲುಪಿದೆ.

ಜನಗಣತಿಯ ಪ್ರಕಾರ 1901ರಲ್ಲಿ 1000 ಗಂಡಸರಿದ್ದರೆ 972 ಹೆಂಗಸರ ಸಂಖ್ಯೆ ಇತ್ತು, ಅದು ಕಡಿಮೆಯಾಗುತ್ತಾ 1981ರ ವೇಳೆಗೆ 1000 ಕ್ಕೆ 935 ಆಗಿದೆ ಹೀಗಿದ್ದರೂ ಈ ತರಹದ ತಾಂತ್ರಿಕತೆಯ ಬಳಕೆಯು ಹೆಣ್ಣಿನ ಸಂಖ್ಯೆಯನ್ನು ಇನ್ನೂ ಕಡಿಮೆಗೊಳಿಸುವುದರಲ್ಲಿ ಸಂದೇಹವೇ ಇಲ್ಲ. ಈಗಲೇ ನಾವು ಜಾಗ್ರತರಾಗದಿದ್ದರೆ ಮುಂದೆ ಬರುವ ಇನ್ನೂ ವಿಷಮ ಸ್ಥಿತಿಗೆ ನಾವೇ ನೈತಿಕವಾಗಿ ಹೊಣೆಗಾರರಾಗುತ್ತೇವೆ.

ಮೇಲಾಗಿ ಹೆಣ್ಣು ಈ ಸಮಾಜದ ವ್ಯವಸ್ಥೆಯಲ್ಲಿ ಜೀವನ ಸಾಗಿಸುವುದು ಭಯದ ಕಟ್ಟಡದ ಮೇಲೆಯೇ ಎಂದಾಗಿದೆ. ಹೆಣ್ಣು ಎಂದು ಹೇಳಿಕೊಳ್ಳಲು ಸಂಕಟವಾಗುವ ಪರಿಸ್ಥಿತಿಯುಂಟಾಗಿದೆ. ಆರ್ಥಿಕವಾಗಿ ಹೆಣ್ಣು ಸಹಾಯಕವಾಗಲಾರಳೆಂಬ ಕಾರಣದಿಂದ ಚಿಕ್ಕಂದಿನ ವಿದ್ಯಾಭ್ಯಾಸದಿಂದಲೇ ವಂಚಿತಳು. ಮುಂದೆ ಈ ಕಾಮುಕರ ಮಧ್ಯ ಶೀಲ ರಕ್ಷಣೆಮಾಡಿಕೊಂಡು, ಉದ್ಯೋಗ ಮಾಡುವುದು ಸಾಮಾಜಿಕ ಕಾರ್ಯಕಲಾಪಗಳಲ್ಲಿ ಭಾಗ ವಹಿಸುವುದು, ದುಸ್ಸಾಹಸದ ಕಾರ್ಯವಾಗಿದೆ. ಯಾವಾಗಲೂ ಹೆದರಿಕೆಯಿಂದಲೇ ಜೀವನ ಮಾಡಬೇಕಾಗಿದೆ. ಈಗ ಇನ್ನೂ ಚಿಂತಾಜನಕ ಸ್ಥಿತಿಯು ಭ್ರೂಣಾವಸ್ಥೆಯಲ್ಲಿಯೇ ಹೆದರಿಕೊಂಡು ಬಿಡುವಂತಹಸ್ಥಿತಿ ಹೆಣ್ಣಿಗೆ ಉಂಟಾಗಿದೆ.

ಮುಂದುವರೆಯುತ್ತಿರುವ ವೈಜ್ಞಾನಿಕ ತಾಂತ್ರಿಕತೆಗಳನ್ನು ಭಾರತದ ದಾರಿದ್ರ್ಯನಿವಾರಿಸಲು, ಮಾನವರೆಲ್ಲರ ಏಳಿಗೆಗಾಗಿ ಶ್ರಮಿಸಲು, ರೋಗ ನಿರೋಧಕ ಔಷಧಿ ತಯಾರಿಸಲು, ಅನಕ್ಷರತೆಯನ್ನು ನಿವಾರಿಸಲು, ಮಾನವರ ಸರ್ವತೋಮುಖ ಬೆಳವಣಿಗೆಗೆ ಬಳಸಿಕೊಳ್ಳಲಿ.

ಈ ರೀತಿಯ ಕ್ರೂರ ಕಾರ್ಯಗಳಿಗಾಗಿ ವೈಜ್ಞಾನಿಕ ವೈದ್ಯಕೀಯ ತಾಂತ್ರಿಕತೆಗಳನ್ನು ಬಳಸಿಕೊಳ್ಳಬಾರದು.

---

## ಅಕ್ಷರಸ್ಥರು

ದೇಶದಲ್ಲಿ ಪ್ರತಿ ನಾಲ್ವರು ಮಹಿಳೆಯರಲ್ಲಿ ಒಬ್ಬಳು ಅಕ್ಷರ ಜ್ಞಾನ ಹೊಂದಿದ್ದರೆ ತಮಿಳುನಾಡಿನಲ್ಲಿ ಪ್ರತಿ ಮೂವರಲ್ಲಿ ಒಬ್ಬ ಮಹಿಳೆ ಅಕ್ಷರಜ್ಞಾನ ಪಡೆದ್ದಿದ್ದಾಳೆ.

ಮಹಿಳೆಯರ ಅಭಿವೃದ್ಧಿಗಾಗಿ ಇರುವ ತಮಿಳುನಾಡು ನಿಗಮದ ಇತ್ತೀಚಿನ ಸಮೀಕ್ಷೆಯ ಪ್ರಕಾರ, ದಶಕಗಳಿಂದ ತಮಿಳುನಾಡ ಮಹಿಳೆಯರ ಅಕ್ಷರ್ಯ ಪ್ರಮಾಣ ಹೆಚ್ಚಿದೆ. ಆದರೆ ಪುರುಷರ ಜತೆ ಹೋಲಿಸಿದರೆ ಕಡಿಮೆ ಇದೆ.

1981 ನೇ ಜನಗಣತಿ ಪ್ರಕಾರ, ತಮಿಳುನಾಡಿನಲ್ಲಿ 4.84 ಕೋಟಿ ಜನಸಂಖ್ಯೆ ಇದೆ. ಇದರಲ್ಲಿ ಮಹಿಳೆಯರ ಸಂಖ್ಯೆ 2.39 ಕೋಟಿ ಇವರಲ್ಲಿ 83 ಲಕ್ಷ ಮಹಿಳೆಯರಿಗೆ ವಿದ್ಯೆಯ ಜ್ಞಾನ ವಿದೆ.

ತಮಿಳುನಾಡಿನಲ್ಲಿ ಪ್ರತಿ ಚದರ ಕಿ.ಮೀ.ಗೆ 184 ಶಿಕ್ಷಿತ ಮಹಿಳೆಯರಿದ್ದಾರೆ ದೇಶದ ಒಟ್ಟು ಸರಾಸರಿ ಪ್ರಮಾಣ ಹಾಗೂ ಕರ್ನಾಟಕ ಮತ್ತು ಆಂಧ್ರಪ್ರದೇಶದ ಸರಾಸರಿ ಪ್ರಮಾಣಕಿಂತಲೂ ಇದು ಎರಡು ಪಟ್ಟು ಹೆಚ್ಚು ದಕ್ಷಿಣ ಭಾರತದಲ್ಲಿ ಅತಿ ಹೆಚ್ಚು ಶಿಕ್ಷಿತ ಮಹಿಳೆಯರಿರುವ ರಾಜ, ಕೇರಳ ಅಲ್ಲಿ ಪ್ರತಿ ಚದರ ಕಿ. ಮೀ.ಗೆ 333 ಶಿಕ್ಷಿತ ಮಹಿಳೆಯರಿದ್ದಾರೆ.

## ಕಳಂಕ

ನಮ್ಮ ರಾಷ್ಟ್ರದ ಕಾರಾಗೃಹಗಳಲ್ಲಿ ಮಹಿಳ ಕೈದಿಗಳಿರುವಂತಹ ಸ್ಥಿತಿ ನಾಗರಿಕ ಸಮಾಜಕ್ಕೆ ಕಳಂಕ ತರುವಂತಹದ್ದು ಎಂದು ಮಹಿಳಾ ಕೈದಿಗಳ ಬಗೆಗಿನ ರಾಷ್ಟ್ರೀಯ ತಜ್ಞರ ಸಮಿತಿ ಅಧ್ಯಕ್ಷ, ನ್ಯಾಯಮೂರ್ತಿ ವಿ. ಆರ್. ಕೃಷ್ಣಅಯ್ಯರ್ ಅಭಿಪ್ರಾಯ ಪಟ್ಟಿದ್ದಾರೆ.

ಮದ್ರಾಸಿನ ಪೊಲೀಸ್ ಕಮಿಷನರ್ ಕಚೇರಿಗೆ ಹೊಂದಿಕೊಂಡಿರುವ ಮಹಿಳಾ ಕೈದಿಗಳ ಲಾಕಪ್ ಶೌಚಗೃಹದ ವಿಸ್ತೃ ಭಾಗದಂತಿದೆ. ಕೇರಳದ ಹೈಕೋರ್ಟ್ ಪಕ್ಷದಲ್ಲೇ ಮೂವರಿಗೆ ಸಾಕಾಗುವಷ್ಟು ಸ್ಥಳ ಇರುವ ಮಹಿಳಾ ಸಬ್‌ಜೈಲ್‌ನಲ್ಲಿ 25 ಮಂದಿ ಇದ್ದಾರೆ ಮಹಿಳಾ ಕೈದಿಗಳಿಗೆ ಯಾವ ಮೂಲಭೂತ ಸೌಲಭ್ಯಗಳನ್ನು ಒದಗಿಸಿಲ್ಲ. ಜೈಲುಗಳ ಸಾಮಾನ್ಯ ಸುಧಾರಣೆ ಬಗೆಗೆ ಈ ಹಿಂದೆ ವಿವಿಧ ಸಮಿತಿಗಳು ಮಾಡಿದ್ದ ಶಿಫಾರಸಗಳನ್ನು ಜಾರಿಗೊಳಿಸಿದ್ದರೂ ಅವುಗಳಲ್ಲಿನ ಸನ್ನಿವೇಶ ಇಷ್ಟು ಕಠೋರವಾಗಿ ಇರುತ್ತಿರಲಿಲ್ಲ ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ.



# ಪುಟಾಣಿ ಪ್ರಪಂಚ

ಅಜ್ಜಿಯ ಮಗ್ಗುಲಲ್ಲಿ ಕಥೆಗಳನ್ನು ಕೇಳುತ್ತಾ ಕಲ್ಪನೆಯ ಎಳೆಗಳ ಚಿತ್ತಾರಗಳಲ್ಲಿ ಮನಸ್ಸುಗಳು ಅರಳುವ ಪ್ರಕ್ರಿಯೆ ಸೋಜಿಗದ್ದು. ಈ ಕಥೆಗಳನ್ನು ಕೇಳುತ್ತಾ ಬೆಳೆಯುವ ಬಾಲಕ ಸಾಹಸ ಧೈರ್ಯ, ಬದುಕನ್ನೆದುರಿಸುವ ಆತ್ಮ ವಿಶ್ವಾಸ, ಸೃಜನಾತ್ಮಕತೆಗೆ ಸಾಗುವಂತಹ ಮನಸ್ಥಿತಿ ಹೊಂದುತ್ತಾನೆ. ಆದರೆ ಏಳು ಮಲ್ಲಿಗೆ ತೂಕದ ರಾಜಕುಮಾರಿಯ ಆದರ್ಶದ ಅನುಕರಣೆಗೆ ತೊಡಗುವ ಬಾಲಕಿ ಬಲಿಷ್ಠ ರಾಜಕುಮಾರನ ಬರುವಿಕೆಗಾಗಿ ಕಾಯುತ್ತಾ ಕನಸಿನ ಪ್ರಪಂಚದಲ್ಲಿ ಮುಳುಗುವಂತಹ ನಿಷ್ಕ್ರಿಯತೆ ಮೈಗೂಡಿಸಿಕೊಳ್ಳುತ್ತಾಳೆ. ಇಂತಹ ಕಥೆಗಳು, ಸಮಾಜದಲ್ಲಿ ಗಂಡು_ಹೆಣ್ಣು ನಿರ್ವಹಿಸಬೇಕಾದ ಸಿದ್ಧ ಪಾತ್ರಗಳನ್ನು ಬಾಲ್ಯದಲ್ಲೇ ಅಚ್ಚೊತ್ತಿ ಬಿಡುತ್ತವೆ. ಸ್ವೀಕೃತ ಮೌಲ್ಯಗಳ ಸಂಕೋಲೆಯಿಲ್ಲದಂತಹ ಮುಕ್ತ ಪರಿಸರದಲ್ಲಿ ವ್ಯಕ್ತಿತ್ವಗಳನ್ನು ಅರಳಿಸುವಂತಹ ಕಲ್ಪನೆಗಳ ಕಥೆ, ಲೇಖನ, ಚಿತ್ರ, ಕವನಗಳನ್ನು ಪ್ರಕಟಿಸುವ ಪ್ರಯತ್ನದ ಫಲವೇ ಈ ಅಂಕಣ ಪುಟಾಣಿ ಪ್ರಪಂಚ'



## ಹೇಳೆ, ಅಮ್ಮಾ... ಉತ್ತರವಾ

ತೋಟಕ್ಕೆ
ನಾ ಅಪ್ಪನ ಸಂಗಡ ಹೋಗುವೆನೆಂದರೆ
ಬೇಡೆನ್ನುವೆ
ಯಾಕಮ್ಮಾ ?
ನಿತ್ಯವೂ
ನಿನ್ನ ಬಳಿಯಿದ್ದು ನೀನ್ ಹೇಳುವ
ಕೆಲಸದಲಿ ಎನಗೆ ಬೇಸರ
ಬರದೇನಮ್ಮಾ ?
ನಾ
ಮಾಡುವ ಕೆಲಸವ ರಾಮನು
ಮಾಡಿದರೆ ಗದರುವಿ ಅವಗೆ
ಏಕಮ್ಮಾ ?
ಮಾಡುವ
ಕಾಯಗಳಲ್ಲಿ ಭೇದವಿರಬಾರದೆಂದ ನೀ
ಸಿಡುಕುವೆ, ನಮ್ಮಿರ್ವರ ಕೆಲಸದದಲು
ಹೀಗೇಕಮ್ಮಾ ? ಬದಲಿಗೆ
ರಾಮನು
ಗಂಡಾದರೇನು, ನಾ ಹೆಣ್ಣಾದರೇನು
ನಾವೀರ್ವರೂ ನಿನ್ನ ಕಂದಮ್ಮಗಳು
ಹೌದಲ್ಲವೇನಮ್ಮಾ ?
ನಾ
ಅಪ್ಪನ ಜತೆಗೂಡಿ ಹೊರಗೆ
ರಾಮನು
ನಿನ್ನ ಜತೆಗೂಡಿ ಒಳಗೆ
ದುಡಿದರೆ
ತಪ್ಪೇನಮ್ಮಾ ?
ಹೆಣ್ಣಾದರೇನು
ಗಂಡಾದರೇನು, ಕೊಟ್ಟ ಕಾಯಕ
ಮಾಡಿಟ್ಟರೆ ಸರಿ
ಅಲ್ಲವೇನಮ್ಮಾ ?
ಹಿಂದೆಂದೂ
ನಿನಗೆ ಹೀಗೆ ಅನ್ನಿಸಿಯೇ
ಇಲ್ಲವಾ, ಮುಚ್ಚುಮರೆಯಿಲ್ಲದೆ
ನಿಜವ ಅರುಹಮ್ಮಾ !

–ಮಂದಾಕಿನಿ

# ಸಂವೇದನೆ



ತಾಳಿಗೆ ಕೊರಳೊಡ್ಡುವ ಮುನ್ನ
ಹುಚ್ಚೆದ್ದು ಕುಣಿದಿತ್ತು
ತಾಯ್ತನದ ಹಂಬಲ ;
ಮೌನದಾಳದ ಮಾತರಿವ ಮುನ್ನ
ಕಿಚ್ಚೆದ್ದು ತಣಿದಿತ್ತು
ಕಿಡಿಗಣ್ಣ ಕುತೂಹಲ

ಆ ಪರಿಸರದ ಹೃದಯಗಳಲ್ಲಿ ಎದ್ದ ಆ ಕಿಚ್ಚು, ಅವಳ ಮಾನಸ ಸರೋವರದ ಒಂದೊಂದೇ ಹೂವನ್ನು ಸುಡುತ್ತಿತ್ತು.

ಪುಟ್ಟ ಮಗುವಿನ ಪಕ್ಕ ಆ ತಾಯಿ ಮಲಗಿದ್ದಾಳೆ–ಕಣ್ಣು ನೇರಕ್ಕಿದ್ದ ಸೂರನ್ನೇ ದಿಟ್ಟಿಸುತ್ತಾ. ಬೆಳಿಗ್ಗೆ ಬಂದಿದ್ದ ದಾದಿಯ ಮಾತುಗಳು ಮರುಕಳಿಸಿ ಆ ಕಣ್ಣಲ್ಲಿ ಕಂಬನಿದುಂಬಿವೆ......

"ಏನಮ್ಮಾ ಇಂಥಾ ಕೆಲ್ಸ ಮಾಡ್ಬಿಟ್ಟೆ? ಎಷ್ಟಾದ್ರೂ ಹೆಣ್ಣು ಮಕ್ಳು ತಗ್ಗಿಬಗ್ಗಿ ಬಾಳ್ಬೇಕು. ನಿಂಗೆ ಅಮ್ಮ ಇಲ್ದಿದ್ರೇನು? ಆ ಹೆಂಗಸ್ರೆಲ್ಲಾ ನಿನ್ನ ಚೆನ್ನಾಗಿ ನೋಡ್ಕೋತಿರ್ಲಿಲ್ವಾ? ಮಗೂ ಆಗಕ್ಕೆ ಮುಂಚೇನೇ ಅವರ ಹತ್ರ ಆಗ್ಲೀ, ನಿಮ್ಮಪ್ಪನ್ಹತ್ರಾಗ್ಲೀ ಇಂಥೋರ ಜೊತೆ ಮದ್ವೆ ಮಾಡ್ಕೊಡೀಂತ ಕೇಳಕ್ಕಿಲ್ವಾ? ನಿಂಗೆ ಯಾರೇನು ಕಮ್ಮಿ ಮಾಡಿರೋದು? ನಿನ್ನಿಂದ ಅವರ ಮಕ್ಳೂ ಕೆಟ್ಟ ದಾರಿ ಹಿಡೀತವೆ........" –ವ್ಯವಸ್ಥೆ ಆ ದಾದಿಯ ಬಾಯಿಂದ ಈ ಮಾತುಗಳನ್ನೆಲ್ಲಾ ಹೇಳಿಸಿತ್ತು.

ಎಂದೋ ಬದುಕ ತ್ಯಜಿಸಿ ದೂರಾದ ತಾಯ ನೆನಪುಕ್ಕಿತ್ತು.

ಅಮ್ಮ ಇದ್ದಿದ್ದರೆ? ಇವರೆಲ್ಲರ ಹಂಗಿಗೆ ಬೀಳುವ ದುರಂತ ತಪ್ಪುತ್ತಿತ್ತು. ಮಿಕ್ಕೆಲ್ಲಾ ಹೆಣ್ಣು ಮಕ್ಕಳಂತೆ ತಾನೂ ತಾಯಿಯಿಂದ ಆರೈಕೆ ಪಡೆಯಬಹುದಿತ್ತು. ಪ್ರಪಂಚದಲ್ಲೆಲ್ಲಾ ತನಗಿದ್ದ ಒಂದೇ ಒಂದು ವಸ್ತು-ಆತ್ಮೀಯವಸ್ತು–ಅಮ್ಮ. ತಾನು ಪ್ರಾಥಮಿಕ ಶಾಲೆ ಓದುತ್ತಿದ್ದಾಗಲೇ ದೂರಾಗಿದ್ದಳು. ಆಗಿನಿಂದ ಮನೆಗೆಲ್ಲಾ ಇಬ್ಬರೇ–ತಾನು ಮತ್ತು ಅಪ್ಪ. ಅಮ್ಮ ದೂರಾದಾಗ ರಸ್ತೆಯ, ಬೀದಿಯ ಹೆಂಗಸರೆಲ್ಲಾ ಅವಳನ್ನು ಪ್ರೀತಿ ಸಲುಗೆಯಿಂದ ನೋಡಿಕೊಂಡರು.

ಶಾಲೆ ಮುಗಿದು ಕಾಲೇಜಿಗೆ ಹೋಗುವಾಗ ಸಹಪಾಠಿಯೊಬ್ಬನ ಪರಿಚಯ ಸ್ನೇಹಕ್ಕೆ ತಿರುಗಿ, ಸ್ನೇಹ ಪ್ರೀತಿಗೆ ತಿರುಗಿ, ಇಬ್ಬರೂ ಸಹಬಾಳ್ವೆ ನಡೆಸಲು ನಿರ್ಧರಿಸಿದ್ದರು ; ಲೈಂಗಿಕ ಸಂಬಂಧವನ್ನೂ ಬೆಸೆದು ಅವಳು ತಾಯಿಯಾಗಿದ್ದಳು ; ಸಮಾಜದ ಕಣ್ಣಿಗೆ ವ್ಯಭಿಚಾರಿಯಾದಳು.

ಹೃದಯ–ಹೃದಯದ ಬೆಸುಗೆಯೇ ಮದುವೆ–ಪ್ರೀತಿಯರಿತ ಜೀವಗಳ ಭಾವಸಮ್ಮಿಲನವೇ ಮದುವೆಯೆಂದು ಭಾವಿಸಿದ್ದರು. ಅಂತೆಯೇ ಅವರ ಅಕ್ಕಪಕ್ಕದವರೆಲ್ಲರಿಂದ ಅವಳು ನೀತಿಗೆಟ್ಟವಳಾದಳು. ಅವರೆಲ್ಲಾ, ಈ ತನಕ ಬೆಸೆದ ಸ್ನೇಹವನ್ನೂ ಮರೆತು ಅವಳನ್ನು ದೂಷಿಸಿದರು–ವ್ಯಂಗ್ಯವಾಡಿದರು, ದೂರ ಮಾಡಿದ್ದರು.

"ನನ್ನ ರಸ್ತೆಯ ಹೆಂಗಸರೇ... ಈ ತನಕ, ಅಂದು ಸತ್ತ ತಾಯಿಯೇ ಇಂದು ಮರುಜನ್ಮ ಪಡೆದಳೋ ಎಂಬಂತೆ ಬಂದ ಅಮ್ಮಗಳಿರಾ, ಈಗೆಲ್ಲಿ ನಿಮ್ಮ ಪ್ರೀತಿ? ಎಲ್ಲಿ ನಿಮ್ಮ ಹೃದಯವಂತಿಕೆ? ಹೃದಯ ವೈಶಾಲ್ಯ?" ....ಅವಳ ಮೌನದಾಳದಲಿ ಕೊರಗು.

ತನ್ನ ಮಕ್ಕಳ ಜೊತೆಯಲ್ಲೇ ಇವಳಿಗೂ ಊಟ ಹಾಕಿದ್ದವಳು. ಹೋದೆಡೆಗೆಲ್ಲಾ ಇವಳನ್ನೂ ಕರೆದೊಯ್ದಿದ್ದವಳು, ವಾತ್ಸಲ್ಯದಿಂದ ಮಾತೃಭಾವ ಬಿತ್ತಿದ್ದವಳು–ಈಗ ಅವರಿವರ ಬಳಿಯೆಲ್ಲಾ ಇವಳನ್ನು ದೂರುತ್ತಿದ್ದಳು.

"ಅಮ್ಮಾ ತಾಯೀ....ನಿನ್ನಿಂದ ನನ್ನ ಮಕ್ಳೆಲ್ಲಾ ಹಾಳಾಗೋದು ಬ್ಯಾಡಾ...ದಯವಿಟ್ಟು ಆ ರೋಡಿಗೆ ಮತ್ತೆ ಬರ್ಬೇಡಾ...ಯಾವೋನಿಂದ ಹಿಂಗ್ ಮಾಡ್ಕೊಂಡ್ಯೋ...ಅವನ ಜೊತೇನೇ ಎಲ್ಲಾರಾ ಇದ್ಕೋ"–ಇನ್ನೊಬ್ಬ ಹೆಂಗಸು ಮೂದಲಿಸಿದ್ದಳು.

"ನೋಡಿದಿಯಾ ಅವಳನ್ನಾ...ಸೋಶಿಯಲ್ ಸೋಶಿಯಲ್ ಅಂದ್ಕೊಂಡು ಮದ್ವೇಗೆ ಮುಂಚೇನೇ ಹೇಗೇ ಹಾಳಾದಳೂಂತ? ನೀನೂ ಅಷ್ಟೇ–ಸೋಶಿಯಲ್ ಅಂದ್ಕೊಂಡು ಕೆಲ್ಸಕ್ಕೆ ಹೋಗೋ ಕಡೆಯೆಲ್ಲಾ ಏನಾದ್ರೂ ಮಾಡ್ಕೊಂಡ್ ಬಂದೀಯಾ ಜೋಕೆ..." –ಇವಳನ್ನೇ ಉದಾಹರಣೆಯಾಗಿಟ್ಟುಕೊಂಡು ತನ್ನ ಮಗಳಿಗೆ ಬುದ್ಧಿ ಹೇಳಿದ್ದವಳೊಬ್ಬಳು.

ತಾನೀಗ ಒಂದು ಮಗುವಿಗೆ ತಾಯಾದ ಹರ್ಷವೊಂದು ಕಡೆ, ತಂದೆಯೂ ಸೇರಿದಂತೆ ಎಲ್ಲರೂ ತನ್ನನ್ನು ದೂರ ಮಾಡಿದ ನೋವೊಂದು ಕಡೆ.

"ನೀತಿಗೆಟ್ಟ ಕೆಲಸ ಮಾಡಿ ನನ್ನ ಘನತೆ ಗೌರವಕ್ಕೇ ಮಸಿ ಬಳಿದು ಬಿಟ್ಟೆ. ಇನ್ನು ಮುಂದೆ ಒಂದು ಹೆಜ್ಜೆಯೂ ಮನೆಯೊಳಕ್ಕೆ ಬರಬೇಡ. ಆ ನೀಚನ ಹಿಂದೇನೇ ಹೊರಟೋಗು"– ಸಿಟ್ಟಿನಿಂದ ಕೆಂಡವಾದ ತಂದೆಯ ಘರ್ಜನೆ.

ಈವರೆಗೂ ಒಂದು ದಿನವಾದರೂ ಪ್ರೀತಿಯ ಆತ್ಮೀಯದನಿಯಲ್ಲಿ ಮಾತಾಡಿಸದ ತಂದೆ–ಅಮ್ಮ ಬೆಳಗಿಹೋದ ಜ್ಯೋತಿಗೆ, ಅವಳೊಡನೆಯೇ ಶೋಭೆ-ಜೀವಂತಿಕೆಗಳನ್ನೂ ಕಳೆದುಕೊಂಡು ಭಯಂಕರ ಮೌನದಲ್ಲಿ ಭಣಗುಟ್ಟುವ ಮನೆಗೆ, ಮಗಳೆಂಬ ಒಂದು ಹೆಣ್ಣು ಜೀವಕ್ಕೆ ವಾರೆಸುದಾರ. ಅವಳ ಭಾವನೆಯೇನು? ಅವಳ ಕೋರಿಕೆಯೇನು–ಕೊರತೆಯೇನು–ಯಾವುದಕ್ಕೂ ಇಂಬುಗೊಡದ ನಕಾರಾತ್ಮಕ ಯಂತ್ರ. ಅವಳ ವಿದ್ಯಾಭ್ಯಾಸಕ್ಕೆಂದು ಪುಸ್ತಕ....ಫೀಸು....ಬಟ್ಟೆಗಳನ್ನು ಮಾತ್ರ ಒದಗಿಸಿಕೊಡಬಲ್ಲ ಯಂತ್ರ. ಆ ಯಂತ್ರದಲ್ಲಿ ಯಾವ ಸಂವೇದನೆಗೂ ತಾವಿಲ್ಲ. ಅಂತರಾಳದ ಯಾವೊಂದು ವಿನಿಮಯಕ್ಕೂ ಪ್ರವೇಶವಿಲ್ಲ. ಇಂಥ ತಂದೆಗೀಗ...ಗೌರವ ಬೇಕಿತ್ತು....ಘನತೆ ಪ್ರತಿಷ್ಟೆಗಳ ಉಳಿವು ಬೇಕಿತ್ತು! ಆ ತಂದೆಯ ಉರಿಮುಖದ ವ್ಯಗ್ರತೆಗೆ ಹೆದರಿ....ಅವಳು ಅಂತರಾಳದಲ್ಲೇ ಕೊಂದ ಬೇಡಿಕೆಗಳೆಷ್ಟೋ! ಮಾತಾಗಲಾರದ ಮೂಕ ಭಾವಗಳೆಷ್ಟೋ! ಧ್ವನಿಯಾಗಲಾರದ ಮೂಕರೋದನಗಳೆಷ್ಟೋ!

ಈ ತಂದೆಯೂ ಸೇರಿದಂತೆ, ಆ ರಸ್ತೆಯ ಹೆಂಗಸರು, ತನ್ನ ಅಕ್ಕ–ಅಣ್ಣ–ತಂಗಿಯರೆಂತಿದ್ದ ಅವರ ಮಕ್ಕಳು-ಎಲ್ಲರೂ ಇಂದು ದೂರಾಗಿದ್ದಾರೆ. ಆ ನೋವು ಅವಳಲ್ಲಿ ಮತ್ತೆ ಮತ್ತೆ ಮರುಕಳಿಸಿ ಹಿಂಸಿಸುತ್ತಿದೆ. ಸೂರನ್ನೇ ಬಿಡುಗಣ್ಣಿಂದ ದಿಟ್ಟಿಸುತ್ತಾ ಮಲಗಿರುವ ಅವಳ ನಿಶ್ಚಲ ಮೌನದಾಳದಲ್ಲಿ ದೀರ್ಘರೋದನ "....ಎಷ್ಟು ಕ್ಷುಲ್ಲಕ ವಿಚಾರಕ್ಕೆ...ಸಣ್ಣ ಕಾರಣಕ್ಕೆ ನಿಮ್ಮೆಲ್ಲರಿಗೆ ಪರಕೀಯಳಾಗಿಬಿಟ್ಟೆ! ಗೆಳೆಯ–ಗೆಳತಿಯರೇ...ಅಕ್ಕ–ಅಮ್ಮಂದಿರೇ... ತಂದೆಯೇ...... ನನ ರಸ್ತೆಯೇ...ನನ್ನ ಮನೆಯೇ...ನೀವೆಲ್ಲಾ ನನ್ನನ್ನ ಇಷ್ಟು ಬೇಗ ಪರಕೀಯಳಾಗಿ ಮಾಡಿಬಿಟ್ಟಿರಾ ? ಮಾನವೀಯ ಬಾಂಧವ್ಯವನ್ನೇ ಮರೆತು ಇಷ್ಟುಬೇಗ ಹೊರಗಟ್ಟುವಿರೆಂದು ನಾ ತಿಳಿದಿರಲಿಲ್ಲ. ಆದರೆ ನಾನು ? ನಿಮ್ಮೆಲ್ಲರನ್ನೂ ಮತ್ತೆ ಮತ್ತೆ ನೆನೆಯುತ್ತಾ ನಿರಂತರ ಮರುಗುತ್ತೇನೆ. ಹೋಗಲಿ ಬಿಡಿ. ನನ್ನ ನತದೃಷ್ಟ ವಿಧಿಗೆ ಯಾರೇನು ತಾನೇ ಮಾಡಲು ಸಾಧ್ಯ? ದೂರಾಗಿ. ಇನ್ನೂ ದೂರಾಗಿ...ಎಂದೆಂದಿಗೂ ನನ್ನಿಂದ ದೂರಾಗಿಅಂತರಾಳದ ನೋವು ಕಂಬನಿಯಾಗಿತ್ತು.

ಮಂಚದ ಬಳಿ ಬಂದು ನಿಂತ ಪ್ರಿಯತಮನ ಧ್ವನಿ ಅವಳನ್ನು ವಾಸ್ತವಕ್ಕೆಳೆಯುತ್ತದೆ. "ಅಳಬೇಡ ಗೆಳತೀ. ಸಿಹಿ-ಕಹಿಗಳ ಸಂಗಮ ಬದುಕು. ಹಳ್ಳ ದಿಣ್ಣೆಗಳು ಕಲ್ಲು ಮುಳ್ಳುಗಳ ಹಾದಿಯನ್ನು ದಾಟಿ ಹೋಗೋಣ. ಅಲ್ಲಿ ಉಜ್ವಲ ಬದುಕಿನ ದೇಗುಲವ ಕಟ್ಟೋಣ. ಪ್ರೇಮದ ಜ್ಯೋತಿ ಬೆಳಗಿ ಬೆಳಕಲ್ಲಿ ಬಾಳೋಣ. ಅಳಬೇಡ"–ಪ್ರೇಮಪೂರಿತ ಹಸ್ತದಿಂದ ಕಂಬನಿಯೊರೆಸುತ್ತಾನೆ.

ಅವಳೆದೆಯ ನೋವನ್ನು ಕಿತ್ತು ಕನಸುಗಳನ್ನು ಬಿತ್ತಿತ್ತು-ಆ ಸಾಂತ್ವನ: ಮೂಕ ರೋದನದಲ್ಲಿ ಉಲ್ಲಸಿತ ಕೂಜನದ ಕನಸು ; ಬದುಕಿನ ಹೋರಾಟ ರಂಗದಲ್ಲಿ ಹೂಬನದ ಕನಸು. ನೋವಿನ ಕಣ್ಣೀರಲ್ಲಿ ನಗುವಿನ ಕಾರಂಜಿಯ ಕನಸು ನಿಟ್ಟುಸಿರಲ್ಲಿ ನಿಶ್ಚಿಂತತೆಯ ತಂಗಾಳಿ ಕನಸು...ಕಾಣುತ್ತಾಳೆ ಕನಸುಗಳ.

....ಹೀಗೆ. ಕನಸುಗಳ ಕಾಣುತ್ತಾ ಮಲಗಿದ್ದವಳನ್ನು ಅಂದು ಆಸ್ಪತ್ರೆಯಲ್ಲಿ ಕಂಡಿದ್ದೆ. ಮತ್ತೆ ಕಂಡಿರಲಿಲ್ಲ. ಸುದೀರ್ಘ ಕಾಲಾಂತರದಲ್ಲಿ ಮತ್ತೆ ಕಂಡೆ ಹರ್ಷಿತಳಾದೆ.

ಬಸ್ ಸ್ಟಾಪಿನಲ್ಲಿ ಬಸ್ಸಿಗಾಗಿ ಕಾಯುತ್ತಾ ನಿಂತಿದ್ದಾಳೆ-ಅಂದು ಮೂದಲಿಸಿದ್ದ ಹಲವರೂ ಇದ್ದಾರೆ-ಬಸ್ಸಿಗೆ ಕಾಯುತ್ತಾ. ಅವಳು ನಿರ್ಲಿಪ್ತಳಾಗಿದ್ದಾಳೆ. ಯಾರ ಸುಡುನೋಡಕ್ಕೂ ಬೆಚ್ಚದೇ-ಬೆದರದೇ.

ಒಂದು ಕೈಯಲ್ಲಿ ತನ್ನ ಪರ್ಸ್ ಮತ್ತು ಮಗನ ಪುಸ್ತಕದ ಚೀಲ. ಇನ್ನೊಂದು ಕೈಯಲ್ಲಿ ಮಗನ ಕೈಹಿಡಿದು ನಿಂತಿದ್ದಳು–ಅವಳೀಗ ಒಂದು ಸಂಸ್ಥೆಯಲ್ಲಿ ಉದ್ಯೋಗಸ್ಥೆ. ಮಗನೀಗ ಒಂದು ಶಾಲೆಯಲ್ಲಿ ವಿದ್ಯಾರ್ಥಿ. ಇರಿವ ನೋಟಗಳ ಮಧ್ಯೆಯಲ್ಲೂ ನಿರ್ಲಿಪ್ತಳಾಗಿ ಮುಕ್ತ ಬದುಕು ಬದುಕಿದ್ದವಳು ಕಂಡಳು–

ಬಿರುಗಾಳಿಯಲ್ಲೂ ಆರದೇ ಉಳಿಯುತ್ತಿರುವ ನಂದಾದೀಪದ ಹಾಗೆ. ಕಾಡ್ಗಿಚ್ಚಿನಲ್ಲಿಯೂ ಸುಟ್ಟು ಹೋಗದೇ ಚಿಗುರನುಳಿಸಿಕೊಂಡ ಹಸಿರು ಗಿಡದ ಹಾಗೆ. ಪ್ರವಾಹದ ವಿರುದ್ಧ ಈಜಿದರೂ ಒಡೆದು ಹೋಗದೇ ದಡಸೇರಿದ ದೋಣಿಯ ಹಾಗೆ.

ಜಿ. ಕೆ. ಸಾವಿತ್ರಿ

# ಓದುಗರ ವಿಭಾಗ

ಮಾನವಿ ಮನ ತುಂಬಿತು. ನಾನು ಕನಸಿದ ಮೆಚ್ಚುಗೆಯ ಕೆಲ ಅಂಕಣಗಳು ಮಾನವಿಯ ಚೆಲುವಿಗೆ ಮೆರಗು ತಂದಿದೆ. ಹಳ್ಳಿಗರ ದನಿ ಬಿಂಬಿಸೋದಕ್ಕೆ ಹಳ್ಳಿ ದನಿಯಾಗಿ ಒಂದು ಅಂಕಣ ಇಟ್ಟು ಬಿಡಿ. ಯಾಕೆಂದ್ರೆ ನಾವು ಬರೆಯೋದಕ್ಕೆ ಪಟ್ಟಣವನ್ನೇ ನೆಚ್ಚಿದ್ದೇವೆ. ಈಗಿನ ಯುವಜನಾಂಗ ಹಳ್ಳಿಯ ಕಡೆ ಗಮನಿಸುತ್ತಿಲ್ಲ.

ಸ್ಫೂರ್ತಿ ದೇವಿ
ಬೀದರ್

ಇಂದಿನ ಸಮಾಜದಲ್ಲಿ ದಿನೇ ದಿನೇ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆ, ದೌರ್ಜನ್ಯದ ವಿರುದ್ಧ ಧೈರ್ಯದಿಂದ ಅವರಿಗೆ ಬೆಂಬಲವಾಗಿ ನಿಲ್ಲುತ್ತಿರುವ 'ಮಾನವಿ'ಗೆ ನನ್ನ ಅಭಿನಂದನೆಗಳು. ನಿಮ್ಮ ಪತ್ರಿಕೆಗೆ ನನ್ನ ಸಹಕಾರ, ಬೆಂಬಲವಿದೆ.

ತೊ. ಸಿ. ಜಗದೀಶ್‌ಬಾಬು
ಕೊಡಿಗೇನಹಳ್ಳಿ

ನಿಮ್ಮ ನಿರಾಡಂಬರದ ಪ್ರತಿಭಾಪುರಸ್ಕಾರಕ್ಕೆ ನಮ್ಮಂಥ ಕಾಡಮಲ್ಲಿಗೆಗಳ ತುಂಬು ಹೃದಯದ ಸ್ವಾಗತ ಸದಾ ಇದ್ದೇ ಇದೆ.

ಚಂದ್ರಮಲ್ಲಿಗೆ
ಕೋಟಿಗನಹಳ್ಳಿ

ನೀವು ಹೊರ ತರುತ್ತಿರುವ 'ಮಾನವಿ' ಪತ್ರಿಕೆಯು ಪ್ರತಿಯೊಂದು ಹಳ್ಳಿಗಾಡಿನ ಮುಗ್ಧ ಸ್ತ್ರೀಯ ಬೆಳವಣಿಗೆಯು ಉತ್ತುಂಗ ಶಿಖರಕ್ಕೆ ಏರಲು ಸಹಕಾರಿಯಾಗಿದೆ. ನಿಮ್ಮ ಪತ್ರಿಕೆಯು ವ್ಯಕ್ತಿ ಮತ್ತು ವ್ಯಕ್ತಿತ್ವ ಮತ್ತು ಮಾನವೀಯತೆಯ ಮೌಲ್ಯವನ್ನು ಬೆಸೆಯುವಲ್ಲಿ ತುಂಬಾ ಸಹಕಾರಿಯಾಗಿದೆ. ಮಾನವಿ ಪತ್ರಿಕೆಯು ಚಿರಕಾಲ ಉಳಿಯಲೆಂದು ನನ್ನ ಕೋರಿಕೆ.

ಸೂಜಿಕಲ್ಲು ಪಿ. ನಾರಾಯಣಸ್ವಾಮಿ
ಸೂಜಿಕಲ್ಲು

ನಿಮ್ಮ ಪತ್ರಿಕೆ ಮಾನವಿಯನ್ನು ನೋಡಿ ತುಂಬಾ ಸಂತೋಷ ಉಂಟಾಯಿತು.

ತೆರೇಸಿಯಮ್ಮ
ಬೆಂಗಳೂರು

ಕಳೆದ ಸಂಚಿಕೆಯಲ್ಲಿ ಎಚ್. ಎಸ್. ರಾಜೇಶ್ವರಿ ಬರೆದ ಸಿಮನ್. ಡಿ ಬುವಾಳ್ ಬಗ್ಗೆ ಬರೆದ ಲೇಖನ ತುಂಬಾ ಸೊಗಸಾಗಿತ್ತು. ಮಹಿಳಾ ಶೋಷಣೆ, ವರದಕ್ಷಿಣೆ ವಿರುದ್ಧ ಕವನ, ಲೇಖನಗಳನ್ನು ಪ್ರಕಟಿಸಿದಕ್ಕಾಗಿ ಧನ್ಯವಾದಗಳು. ನನ್ನ ನೆಚ್ಚಿನ ಮಾನವಿ ಪತ್ರಿಕೆಯಲ್ಲಿ ವಿಚಾರ ಪೂರ್ಣವಾಗಿ ವಿಶ್ಲೇಷಿಸಿ ಇದ್ದದ್ದನ್ನು ಇದ್ದ ಹಾಗೆ ನಿರ್ಭೀತಿಯಿಂದ ಬರೆಯುವರೆಂದು ಆಶಿಸುತ್ತೇನೆ.

ತಾಳೀಕೋಟೆ ಸೂಗೂರೇಶ್ವರ
ಅರಕೇರಾ

ಪ್ರತಿಯೊಬ್ಬ ಮಹಿಳೆಗೆ ಮಾನವಿ ತಲುಪಬೇಕಾಗಿದೆ. ಮಾನವಿಯ ಪ್ರಸಾರ ಹೆಚ್ಚುತ್ತಾ, ಸಮಾನತೆಯ ಬೆಳಕನ್ನು ಹರಡಲೆಂದು ಹಾರೈಸುತ್ತೇನೆ.

ಎನ್. ಎನ್. ಚೌಶೆಟ್ಟಿ

ಮಾನವಿ ಸ್ತ್ರೀ ಸಮುದಾಯದ ಧ್ವನಿಯಾಗಲೆಂದು ಆಶಿಸುತ್ತೇನೆ.

ಮು. ರಾ. ಅನಂದಮೂರ್ತಿ
ಬೆಂಗಳೂರು

ಎಚ್. ಎಸ್. ರಾಜೇಶ್ವರಿಯವರ ಸಿಮನ ದಿ ಬುವಾಳ ಮೇಲಿನ ಲೇಖನ ವೈಚಾರಿಕತೆಯಿಂದ ಕೂಡಿತ್ತು. ಇಂತಹ ಲೇಖನ ನಿಮನರ ನೆನಪಿಗೊಂದು ಕಾಣಿಕೆ.

ಕಲಾ
ಶಿವಮೊಗ್ಗ



# ಗಾಂಧಿ ದೃಷ್ಟಿಯಲ್ಲಿ ಹೆಣ್ಣು

ಬಾಲ್ಯಾವಸ್ಥೆಯಿಂದಲೇ ನಮ್ಮಲ್ಲಿ ದಾಸ್ಯಪ್ರಜ್ಞೆ ಬಲವಾಗಿ ಬೆಳೆದು ಬಂದುಬಿಟ್ಟಿದೆ. ನಾವು ಸ್ವತಂತ್ರರಾಗಿ ಏನಾದರೊಂದನ್ನು ಚಿಂತಿಸಲು ಅಸಮರ್ಥರು. ಇನ್ನು ಸ್ವತಂತ್ರರಾಗಿ ನಡೆಯಬಲ್ಲೆವೇ? ನಾವು ಜಾತಿಯ ದಾಸರು. ಪಾಶ್ಚಾತ್ಯ ಶಿಕ್ಷಣದ ದಾಸರು ಮತ್ತು ಪರಕೀಯವಾದ ಸರ್ಕಾರದ ದಾಸರು.

ನಾವು ದುಃಖಮಯ ಬದುಕಿನ ವಿಧವೆಯರ ಬಗ್ಗೆ ಅನುಕಂಪದ ಮಾತುಗಳನ್ನಾಡುತ್ತಿಲ್ಲವೇಕೆ ? ಆ ವಿಧವೆಯರ ತಂದೆ-ತಾಯ್ಗಳು ಹಾಗೂ ವಾರಸುದಾರರು ನೋವಿನ ಯಾವ ಕಾರಣವನ್ನೂ ಕಿವಿಗೊಟ್ಟು ಕೇಳುವವರಲ್ಲ. ಏಕೆಂದರೆ ಅವರು ಸಂಪ್ರದಾಯಪೀಡಿತರಾಗಿದ್ದಾರೆ. ಇಂಥ ದುರಂತಬದುಕಿನ ವಿಧವೆಯರಿಗೆ ಹೊಸನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ, ಹೊಸ ಹೆಜ್ಜೆಯಿಡುವಲ್ಲಿ ಪ್ರೋತ್ಸಾಹಿಸಬಾರದೇಕೆ ?

ನಮ್ಮಲ್ಲಿ ವರದಕ್ಷಿಣೆಯಂಥ ಅಸಂಖ್ಯಾತ ಕ್ಷುಲ್ಲಕ ಆಚರಣೆಗಳಿವೆ. ಯುವಕರು ಮುಂದುವರೆದು, ವಿಧವಾ ವಿವಾಹ ಕೈಗೊಂಡಲ್ಲಿ, ಭಾರತೀಯ ಹೆಣ್ಣನ್ನು ಕಾಡುತ್ತಿರುವ ಅಂಥ ನೂರಾರು ಆಚರಣೆಗಳೂ ಸಡಿಲಾಗುವುದಿಲ್ಲವೇ ?

ವಿಧವೆಯರ ಪುನರ್ವಿವಾಹ ಒಂದು ಹಂತದವರೆಗೆ ಅತ್ಯಂತ ಅವಶ್ಯಕವಾಗಿದೆ. ಭಾರತೀಯ ಸಮಾಜದ ಅಥವಾ ವಿಧವೆಯ ಬದುಕಿನ ಪುನರ್ನಿರ್ಮಾಣ ಯುವಜನಾಂಗದ ಅಂತರಾಳ ಶುದ್ಧವಾದರೆ ಮಾತ್ರ ರೂಪುಗೊಳ್ಳುವಂಥದು. ನಿಜಕ್ಕೂ ಯುವಕರು ಪವಿತ್ರಾತ್ಮರೇ? ಅವರು ವಿದ್ಯಾಭ್ಯಾಸದಿಂದ ಲಾಭ ಪಡೆಯಬಲ್ಲರೆ ? ಮತ್ತೆ ಅವರೇಕೆ ತಮ್ಮ ಶಿಕ್ಷಣವನ್ನು ಶಪಿಸುತ್ತಿದ್ದಾರೆ ?

ಒದಗಿರುವ ಪ್ರತಿಯೊಂದು ಸೌಲಭ್ಯವೂ ನಮಗಿಂದು ಸಂಕೋಲೆಯಾಗಿ ಪರಿಣಮಿಸಿದೆ. ನಮ್ಮಲ್ಲಿ ಸುಶಿಕ್ಷಿತ ಯುವಕರು ಹೇರಳವಾಗಿದ್ದಾರೆ. ಅವರ ಮನೆಗಳಲ್ಲೇ ಕಗ್ಗತ್ತಲ ಬದುಕ ನಡೆಸುತ್ತಿರುವ ವಿಧವೆಯರೂ ಅನೇಕರಿದ್ದಾರೆ. ಬೆರಳೆಣಿಕೆಯ ಯುವಕರಾದರೂ, ತಮ್ಮ ತಮ್ಮ ಮನೆಯ ವಿಧವೆಯರ ಬಗ್ಗೆ ಯೋಚಿಸುತ್ತಾರೆಯೇ ? ಅವರ ಬಗ್ಗೆ ಕಳಕಳಿಯುಳ್ಳವರಾಗಿದ್ದಾರೆಯೇ ?

ವಿಧವೆಯರಿಂದ ಹುಚ್ಚೆದ್ದ ಕಾಮದ ತೆವಲು ತೀರಿಸಿಕೊಂಡು, ನಂತರ ಕಸದಂತೆ ಬಿಸಾಡುವ ಯುವಕರು ನಮ್ಮ ಸಮಾಜದಲ್ಲಿ ಹೇರಳವಾಗಿದ್ದಾರೆ. ಅಂಥ ಅನೈತಿಕ ಲಾಭದೆಡೆ ಆಕರ್ಷಿಸಲ್ಪಡುವಂತೆ ಮಾಡುವ ಅಂತರಾಳದ ದುಷ್ಪ್ರೇರಣೆಯನ್ನು ಯಾವೊಬ್ಬನಾದರೂ ನಿಗ್ರಹಿಸುವಲ್ಲಿ ಶಕ್ತನಾಗಿದ್ದಾನೆಯೇ ?

ವಿಧವೆಯಲ್ಲಿ ನಿಮ್ಮೊಡ ಹುಟ್ಟಿದ ಅಕ್ಕತಂಗಿಯರನ್ನು ಯಾರಾದರೂ ಕಂಡಿದ್ದೀರಾ ? ವಿಧವೆಯರಲ್ಲಿ ಹೆತ್ತತಾಯಿಯನ್ನು ಯಾರಾದರೂ ಕಂಡಿದ್ದೀರಾ ? ಕಂಡು ಪ್ರೀತಿಸಿ, ಗೌರವಿಸಿದ್ದೀರಾ ? ಆಶ್ರಯವಿತ್ತು ಕಾಪಾಡಿದ್ದೀರಾ ? ತಾನು ಮಾಡಿರುವ ಪಾಪಕೃತ್ಯಗಳ ಅರಿವು ತನಗಿದೆಯೆಂದು ದೃಢವಾಗಿ ಹೇಳಿಕೊಳ್ಳಬಲ್ಲ ಧೈರ್ಯ ಯಾವೊಬ್ಬನಿಗಾದರೂ ಇದೆಯೇ ? ಆ ಅರಿವಿನ ದೃಢತೆಯಲ್ಲಿ ತಮ್ಮ ದುಷ್ಟತನವನ್ನು ಇಲ್ಲವಾಗಿಸಿಕೊಳ್ಳಲು ಬಹಿರಂಗವಾಗಿಯೂ ಕೂಡ ಪ್ರಯತ್ನಿಸಬಲ್ಲಷ್ಟು ಪ್ರಾಮಾಣಿಕರು-ಯಾರಾದರೂ ಇದ್ದಾರೆಯೆ ? ಇಲ್ಲದಿದ್ದ ಮೇಲೆ ನತದೃಷ್ಟ ವಿಧವೆ ಯಾರ ಮೊರೆಹೋಗುವಳು ? ಯಾರನ್ನಾಶ್ರಯಿಸುವಳು ? ಯಾರನ್ನು ನಂಬುವಳು ?

ನಾನು ಅವಳಿಗೆ-ಯಾವರೀತಿಯ ಸಮಾಧಾನ

ನೀಡಲಿ ? ನಿಮ್ಮಲ್ಲಿ ಕೆಲವರಾದರೂ, 'ನವ ಜೀವನ'ದ ಓದುಗರಿದ್ದೀರಾ ? ಅವರಲ್ಲಿ ಎಷ್ಟು ಜನ ಮಾಡಿರುವ ದುಷ್ಕೃತ್ಯಗಳ ಅರಿವನ್ನೂ. ಅರಿವಿನಿಂದ ಪಶ್ಚಾತ್ತಾಪವನ್ನೂ ಹೊಂದಿದ್ದೀರಾ ? ಆ ಜ್ಞಾನೋದಯವನ್ನು ಬದುಕಿನಲ್ಲಿ ಅಳವಡಿಸಿಕೊಂಡಿದ್ದೀರಾ ?

ನತದೃಷ್ಟ ವಿಧವೆಯರ ಮೂಕರೋದನಗಳನ್ನು ಅರ್ಥೈಸಲೋಸುಗ ನಾನು 'ನವಜೀವನ'ದ ಅನೇಕ ತತ್ವಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಲು ನಿರ್ಧರಿಸಿದ್ದೇನೆ. ಅವಕಾಶ ಸಿಕ್ಕಾಗೆಲ್ಲಾ ಅದನ್ನು ಕಾರ್ಯಗತಗೊಳಿಸಲು ಸಾಧ್ಯವಾದಷ್ಟೂ ಪ್ರಯತ್ನಿಸುತ್ತೇನೆ. ಈ ಸಮಯದಲ್ಲಿ, ನಿಮ್ಮ ನಿಮ್ಮ ಮನೆಯಲ್ಲೇ ವಿಧವೆಯರನ್ನು ರಕ್ಷಿಸುತ್ತಿರುವವರು ಯಾರು ಯಾರು ಇದ್ದೀರೋ ಅವರೆಲ್ಲರ ಮುಂದೆ ನನ್ನದೊಂದು ನಿವೇದನೆ : "ನಿಮ್ಮ ಮನೆಯಲ್ಲಿರುವ ಆ ವಿಧವೆಯನ್ನು ಸಾಧ್ಯವಾದಷ್ಟೂ ನೀವೇ ಮದುವೆಯಾಗಿ" ಎಂಬುದು.

ಹಾಗೆ ಮಾಡುವವನು, ಇಲ್ಲಿನ ಕ್ರೂರ ಸಾಮಾಜಿಕ ಆಚರಣೆಗಳ ಮೇಲೆ ಮೃತ್ಯುಕಿರಣ ಚೆಲ್ಲುವವನಾಗುವನು.

...ಆದರೆ ಇಡೀ ದೇಹವೇ ಕೊಳೆತುಹೋಗಿರುವಾಗ ದೇಹದಲ್ಲಿ ಎಲ್ಲೋ ಒಂದೊಂದು ಕಡೆ ಕೊಳೆಯದೇ ಉಳಿದಂತೆ ಕಾಣುತ್ತಿರುವ ಸಣ್ಣ ಭಾಗಗಳನ್ನು ಕಂಡು ನಾವು ತೃಪ್ತರಾಗುವುದಾದರೂ ಹೇಗೆ ಸಾಧ್ಯ ? ಇಂದು ನಮ್ಮ ಸಮಾಜ ಹೀಗಾಗಿದೆ. ಇಂಥ ಕೊಳೆತ ದೇಹದ ಒಳಭಾಗದಲ್ಲಿ, ಯಾವ ಭಾಗವಾದರೂ ಕೊಳೆಯದೇ ಉಳಿದಿದೆಯೇ-ಎಂದು ಪರೀಕ್ಷಿಸಲು, ಅದನ್ನು ಕೊಯ್ದು ನೋಡುವುದು ತೀರಾ ಅಮಾನುಷವಾದದ್ದು. ಆದ್ದರಿಂದ, ಶವವಾಗಿ, ಕೊಳೆತನಂತರ ಪರೀಕ್ಷಿಸುವುದಕ್ಕಿಂತ ಸುಸಂಸ್ಕೃತವೂ, ಉತ್ತಮವೂ, ಕ್ರೌರ್ಯರಹಿತವೂ ಆದ ರೀತಿಯನ್ನೇ ಪಾಲಿಸೋಣವಲ್ಲವೇ ? ಅದು ರೋಗಿಯು ಸತ್ತು ಕೊಳೆತಹೆಣವಾಗುವ ಮುಂಚೆ ಮಾಡುವ ಔಷಧೋಪಚಾರ : ಇದನ್ನು ಮೊತ್ತಮೊದಲು ಹಿಂದೂ ಧರ್ಮ ಕಲಿಯಬೇಕು. ಏಕೆಂದರೆ ಹಿಂದೂಧರ್ಮ, ಶವವನ್ನು ಕೊಯ್ದುಕೊಯ್ದು ಪರೀಕ್ಷೆಮಾಡುವ ಕ್ರೂರಪದ್ಧತಿಯಲ್ಲಿ ಅದ್ವಿತೀಯವಾದದ್ದು. ಹಿಂದೂಧರ್ಮದ ಈ ಕ್ರೌರ್ಯವನ್ನು ನಾವು ಮೊದಲು ಇಲ್ಲವಾಗಿಸಬೇಕು.

ಇಡೀ ಸಮಾಜ, ಜನರ ನೈತಿಕ ಸ್ಥಿತಪ್ರಜ್ಞೆಯಿಂದ ರೂಪುಗೊಳ್ಳುತ್ತದೆ. ಎಲ್ಲಿಯವರೆಗೆ ನಮ್ಮ ಚಿಂತನೆ ಮತ್ತು ಕೃತಿಗಳು (ಬದುಕು) ಸ್ವತಂತ್ರವಲ್ಲವೋ ಅಲ್ಲಿಯವರೆಗೆ, ಪೂರ್ತಿ ಹರಿದುಹೋದ ಸಮಾಜಕ್ಕೆ ತೇಪೆ ಹಾಕುವುದು, ಅಥವಾ ಪೂರ್ತಿಕೊಳೆತಂತಾದ ಭಾರತೀಯ ಸಮಾಜ ಅಲ್ಲಲ್ಲಿ ಕೊಳೆಯದೇ ಉಳಿದುಕೊಂಡ ಚರ್ಮವನ್ನು ಪರಿಗಣಿಸಿ-ವೈದ್ಯಕೀಯ ಪರೀಕ್ಷೆ ಮಾಡಲುಹೋಗುವುದು, ಏನೂ, ಮಾಡದೇ ಸುಮ್ಮನೆ ಇರುವುದಕ್ಕಿಂತಲೂ ನೀಚತನವಾದೀತು.

## ರತಿಯಲ್ಲ........

ಯಾರಧ್ದೋ ತೀಟೆ (ಕಲ್ಯಾಣ)ಗೆ ಬಲಿಯಾದ
ಪತಿಗೆ ರೋಧಿಸುತ್ತಾ ಕೂತ ಕರುಣಾಜನಕ ರತಿ
ಯಾಗಲಾರೆ.
ಮೆಚ್ಚಿದವನ ಹೊತ್ತು ತಂದು ಕ್ಷಣವಾದರೂ ಸುಖಿಸುವ
ಹಿಡಂಬಿಯಾಗುತ್ತೇನೆ !

ತ್ಯಾಗ-ತಾಳ್ಮೆ, ನಯ-ವಿನಯ ಇತ್ಯಾದಿ
ವಂಚನೆಯ ನವುರು ಕೆತ್ತನೆಗೆ ನನ್ನ ತಲೆ ಬಳಪದ ಕಲ್ಲಲ್ಲ
ಕಲ್ಪನೆಯನ್ನೇ ನುಚ್ಚಾಗಿಸುವ ಬೆಣಚು ಕಲ್ಲು
ಅಳತೆ-ಪ್ರಮಾಣ ತುಟಿ-ಕಟಿಗಳು
ದಾಳಿಂಬೆ ಬೀಜದ ಹಲ್ಲುಗಳು ನನಗೆ ಖಂಡಿತಾ ಬೇಡ !

ಹಸಿ-ಬಿಸಿ ಮಾಂಸವ ಸಿಗಿದು ತಿನ್ನುವ
ಹುಲಿಯುಗುರು, ರಕ್ಕಸಿ ಹಲ್ಲು ಬೆಳೆಸಿದ್ದೇನೆ
ಹೆರವರ ಕಣ್ಣಿಗೆ ಹಬ್ಬವಾಗುವ ಮಲ್ಲಿಗೆ-ಜಾಜಿ ಬೇಡ
ಕಾಡ ಹಕ್ಕಿಯ ರೆಕ್ಕೆ-ಮೂಳೆಗಳಿಂದಲೇ ಸಿಂಗರಿಸಿಕೊಂಡು
ಕಣ್ಣ ಕುಕ್ಕುತ್ತೇನೆ

ಮಾಯದ ಮಹಡಿ-ಮಹಲುಗಳು ಮಣ್ಣಾಗಲಿ
ಕತ್ತಲೆಯ ಗುಹೆಯಲ್ಲೇ ವಿಹರಿಸುತ್ತೇನೆ
ಅಲ್ಲಿಗೂ ಬಂದಿರೋ ಗೊತ್ತಲ್ಲ ?
ವಾಸನೆಯಿಂದಲೇ ಭಕ್ಷಿಸಿ ಬಿಡುತ್ತೇನೆ

ಸುಬ್ಬಲಕ್ಷ್ಮಿ ಜೋಯಿಸ್

ಸಿನಿಮಾ

# 'ಸುಂದರ ಸ್ವಪ್ನಗಳು'

ಒಂದು ವಿಶ್ಲೇಷಣೆ

○ ಶೈಲಜ ಕೆ. ವಿ.

ಬೆಳದಿಂಗಳ ತುಂಬಿಕೊಂಡ ಕಣ್ಗಳು ನಿಧಾನಕ್ಕೆ ಬದುಕಿನ ಕಟು ವಾಸ್ತವದ ಒಳಹೊರಗನ್ನು ನಿರುಕಿಸುತ್ತವೆ. ಭ್ರಮೆಗಳನ್ನು ಕಳಚಿಕೊಳ್ಳುತ್ತ ಅನುಭವದ ಸಿರಿಯನ್ನು ತುಂಬಿಕೊಳ್ಳುತ್ತ ಗಟ್ಟಿತನದ, ಆತ್ಮವಿಶ್ವಾಸದ ಹೊಳಪನ್ನು ಪಡೆಯುತ್ತವೆ. ಒಳಗಿನ ನೋವು, ಹಂಬಲ, ತುಮುಲಗಳನ್ನು ತೆರೆದಿಡುತ್ತ ಬದುಕಿಗೆ ನೇರವಾಗಿ ಬಿಚ್ಚಿಕೊಳ್ಳುತ್ತ ಪೂರ್ಣ ಪ್ರಮಾಣದ ವ್ಯಕ್ತಿತ್ವ ಪಡೆಯುತ್ತ ಬದುಕಿನ ಯಾವು ಯಾವುದೋ ಸತ್ಯಗಳನ್ನು ಬಯಲು ಮಾಡುತ್ತ ಸಾಗುತ್ತವೆ. ಮನಸ್ಸಿನಾಳಕ್ಕಿಳಿಯುತ್ತವೆ.

ಇನ್ನೊಂದು ಕಡೆ ಅದೇ ಕನಸುಗಂಗಳ ಹುಡುಗಿ ಭ್ರಮೆಯ ಬೆನ್ನು ಹತ್ತುತ್ತಾಳೆ. ನಿರಾಶಳಾಗುತ್ತಾಳೆ. ಕನಸುಗಳು ಸತ್ತ ಕಣ್ಣುಗಳಲ್ಲಿ ಕಂಬನಿ ತುಂಬಿಕೊಳ್ಳುತ್ತದೆ. ಕಂಬನಿಯ ಹನಿಗಳು ತ್ಯಾಗದ ಮೆಟ್ಟಿಲುಗಳಾಗುತ್ತವೆ. ಇಲ್ಲವೇ ರೋಷದ ಕಿಡಿಗಳಾಗುತ್ತವೆ. ತ್ಯಾಗಮೂರ್ತಿಯಾಗಿ ಪ್ರೇಕ್ಷಕರ ಕಣ್ಣುಗಳಲ್ಲೂ ಧಾರಾಕಾರವಾಗಿ ನೀರು ಹರಿಸುತ್ತ ಅಥವಾ ಬಂಡಾಯಗಾರಳಾಗಿ ಸೇಡು ತೀರಿಸಿಕೊಳ್ಳುತ್ತ ಚಪ್ಪಾಳೆ ಸಿಳ್ಳುಗಳನ್ನು ಗಿಟ್ಟಿಸುತ್ತ ಗಲ್ಲಾಪೆಟ್ಟಿಗೆಗೆ ಭರ್ಜರಿ ವಸ್ತುವಾಗುತ್ತಾಳೆ.

ಮೇಲಿನ ಎರಡು ಚಿತ್ರಣಗಳು ಇಂದು ನಮ್ಮೆದುರುಗಿರುವ ಕಲಾತ್ಮಕ ಮತ್ತು ವ್ಯಾಪಾರೀ ಚಿತ್ರಗಳಲ್ಲಿ ಚಿತ್ರಿತವಾಗುತ್ತಿರುವ ಸ್ತ್ರೀ ವ್ಯಕ್ತಿತ್ವಗಳು. ಇವುಗಳೊಂದಿಗೆ ಈ ಎರಡೂ ಹಂತಗಳ ನಡುವೆ ರಾಜಿ ಮಾಡಿಕೊಂಡು ಮಧ್ಯಮ ವರ್ಗದ ಎಲ್ಲ ಪ್ರೇಕ್ಷಕರನ್ನು ಸೂರೆಗೊಳ್ಳುವಂತೆ ಅವರ ಹತ್ತಿಕ್ಕಿಕೊಂಡ ಭಾವನೆಗಳನ್ನು ಬಡಿದೇಳಿಸಿ ಅವರನ್ನು ಕ್ಷಣಕಾಲ ಪಾತ್ರದಲ್ಲಿ ಲೀನವಾಗಿಸಿ ತೃಪ್ತಿಪಡಿಸುವಂತಹ 'ಅಚ್ಚುಕಟ್ಟು' ಚಿತ್ರಗಳದು ಇನ್ನೊಂದು ಸಾಲು. ಇಂತಹ ಚಿತ್ರಗಳಿಗೆ ಹೆಸರಾದವರು ದಿ॥ ಪುಟ್ಟಣ್ಣ ಕಣಗಾಲ್ ಮತ್ತು ಕೆ. ಬಾಲಚಂದರ್.

ಮಹಿಳೆಯ ಇಂದಿನ ದ್ವಂದ್ವವನ್ನು, ಆಧುನಿಕ, ಸಮಾಜದಲ್ಲಿ ಆಕೆ ಎದುರಿಸುತ್ತಿರುವ ಅನೇಕ ಸಮಸ್ಯೆಗಳನ್ನು ಮೂಲವಾಗಿಟ್ಟುಕೊಂಡ ಯಾವುದೇ ಚಿತ್ರದ ಒಟ್ಟು ಪರಿಣಾಮವನ್ನು ಆಕೆಯ ಹಿತದೃಷ್ಟಿಯಿಂದ ಪರಾಮರ್ಶಿಸಿ ನೋಡಬೇಕಾದುದು ನಮಗೆ ಅನಿವಾರ್ಯವಾಗುತ್ತಿದೆ. ಇಂತಹುದೊಂದು ಸಂಕ್ರಮಣಕಾಲದಲ್ಲಿ ಗಮನ ಸೆಳೆಯುತ್ತಿರುವುದು ಇತ್ತೀಚೆಗೆ ತೆರೆಕಂಡ ಬಾಲಚಂದರ್ ನಿರ್ದೇಶನದ 'ಸುಂದರ ಸ್ವಪ್ನಗಳು' ಚಿತ್ರ.

ತನ್ನ ಕೆಲಸದಲ್ಲಿ ನ್ಯಾಯವಾಗಿ ಸಿಗಬೇಕಾದ ಬಡ್ತಿ ಸಿಗಲಿಲ್ಲವೆಂಬ ಕಾರಣಕ್ಕಾಗಿ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡ ಮಧ್ಯಮ ವರ್ಗದ ಅಸಹಾಯಕ ತಂದೆಗೆ ಮೂರು ಜನ ವಯಸ್ಸಿಗೆ ಬಂದ ಹೆಣ್ಣುಮಕ್ಕಳು. ಹಿರಿಯವಳು ಜವಾಬ್ದಾರಿಯುತ, ಗಂಭೀರ ಸ್ವಭಾವದ ಉಪಾಧ್ಯಾಯಿನಿ. ಕುಟುಂಬದ ಆರ್ಥಿಕ ಆಧಾರಸ್ತಂಬ ಎರಡನೆಯವಳು ಓದಿಗೆ ಇತಿಶ್ರೀ ಹಾಡಿ ಮನೆಯಲ್ಲಿ ಅಡಿಗೆ ಮಾಡುತ್ತ, ಮದುವೆ ದಾಂಪತ್ಯದ ಬಗ್ಗೆ ಕನಸುವ ಬೆಡಗಿ. ಮೂರನೆಯವಳು ಡಿಗ್ರಿ ಓದುತ್ತಿರುವ, ತುಂಬ ಚೂಟಿಯಾಗಿರುವ ದಿಟ್ಟೆ ಎನಿಸಿಕೊಂಡ ತುಂಟ ಹುಡುಗಿ ಮೂವರು ಹುಡುಗಿಯರು ತಮ್ಮ ಕುಟುಂಬದ ಒಡನಾಟದಲ್ಲಿ ಸಿಲುಕಿಕೊಳ್ಳುವ (ಸಿನಿಮೀಯ ರೀತಿಯಲ್ಲೇ!) ಎಂ.ಡಿ. ಆಗಿರುವ ಸುಂದರ ತರುಣನನ್ನು ಆರಾಧಿಸಲು ಪ್ರಾರಂಭಿಸುತ್ತಾರೆ. ಕನಸುಗಳನ್ನು ಹೆಣೆಯುತ್ತಾರೆ. ಯಾರೂ ನೇರವಾಗಿ ಮನದ ಬಯಕೆಯನ್ನು ಬಿಚ್ಚದೆ ಅವನಿಂದಲೇ ಒಬ್ಬೊಬ್ಬರಾಗಿ ತಿರಸ್ಕೃತರಾದಾಗ ಬೇರೆ ಸಾಂಪ್ರದಾಯಿಕ ಪ್ರಯತ್ನಗಳು ಸಾಗುತ್ತವೆ. ಮನದಲ್ಲೇ ಚಿಕ್ಕ ಹುಡುಗಿಯನ್ನು ಪ್ರೀತಿಸುತ್ತಿದ್ದ ಆ ತರುಣ ಅಕ್ಕಂದಿರ ಮದುವೆಯನ್ನು ನೆರವೇರಿಸುವ ಜವಾಬ್ದಾರಿಯನ್ನು ತಾನೇ ಹೊತ್ತುಕೊಳ್ಳುತ್ತಾನೆ! ಗಂಡುಗಳನ್ನು ಕರೆತರುತ್ತಾನೆ. ಹಿರಿಯವಳನ್ನು ನೋಡಲು ಬಂದ ಹುಡುಗ ಎರಡನೆಯವಳನ್ನು ಇಷ್ಟಪಡುತ್ತಾನೆ. ಇದರಿಂದ ಬೇಸತ್ತ ಹಿರಿಯವಳು ಆತನ ಮನೆಯ ಅಡಿಗೆಯವನ ಆರು ವರ್ಷದ ಮಗುವಿಗೆ ಮೆಚ್ಚಿನ ತಾಯಿಯಾಗಿ ಮನೆತುಂಬುವ ಬದುಕನ್ನು ಆಯ್ದುಕೊಳ್ಳುತ್ತಾಳೆ. ಇತ್ತ ನಾಯಕ ಮಹಾಶಯ ತನ್ನ ಬಯಕೆಯನ್ನು ತಿಳಿಸಬೇಕೆನ್ನುವಷ್ಟರಲ್ಲಿ ಆತನ ಹುಡುಗಿ ತನ್ನ ಗೆಳತಿಯ

ಬಾಳನ್ನು ಹಸನುಗೊಳಿಸುವುದಕ್ಕಾಗಿ ಕಾಲೇಜಿನ ರೌಡಿ, ಕಾಮುಕ ಎಂದು ಹೆಸರಾದ ತರುಣನಿಗೆ ಸವಾಲಾಗಿ ನಿಂತಿರುತ್ತಾಳೆ. ವಯಸ್ಸಾದ ಗಂಡನಿಂದ ತನ್ನ ಗೆಳತಿಯನ್ನು ಬೇರ್ಪಡಿಸಿ ಅವಳೊಂದಿಗೆ ದೇಶ ಬಿಟ್ಟು ಹೊರಟ ಆ ರೌಡಿಗೆ ತನ್ನ ಸೆರಗು ಹಾಸಿ ಆತ ಹೋಗಬೇಕಾಗಿದ್ದ ವಿಮಾನದ ವೇಳೆಯನ್ನು ತಪ್ಪಿಸಿ ಗೆಳತಿಯ ಬಾಳನ್ನು ಕಾಪಾಡುವ ಸಾಹಸ ಮಾಡುತ್ತಾಳೆ. ಇನ್ನೊಬ್ಬನಿಗೆ ದೇಹ ಒಪ್ಪಿಸಿ ನಿಮ್ಮನ್ನು ಮದುವೆಯಾಗಲು ಸಾಧ್ಯವಿಲ್ಲ ಎನ್ನುವ ಆಕೆಯ ತೀರ್ಮಾನ ಆತನನ್ನು ಅವಿವಾಹಿತನನ್ನಾಗಿ ಉಳಿಸುತ್ತದೆ. ಕೊನೆಯಲ್ಲಿ ಆಕೆ ಆ ರೌಡಿಯನ್ನೇ ಮದುವೆಯಾಗುವುದರೊಂದಿಗೆ ಉಳಿದಿಬ್ಬರ ಮದುವೆಗಳನ್ನು ನೆರವೇರಿಸಿ ಅವರ ಸುಂದರ ಸ್ವಪ್ನಗಳಿಗೆ ತೆರೆ ಎಳೆದಿದ್ದಾರೆ ಬಾಲಚಂದರ್.

ಇಂತಹದೊಂದು ಕಥೆಯ ಉದ್ದಕ್ಕೂ ಮಧ್ಯಮ ವರ್ಗದ ಹಿಂಸೆಗಳನ್ನ, ವ್ಯವಸ್ಥೆಯ ಕಟ್ಟುಪಾಡುಗಳನ್ನ ಚಿತ್ರಿಸುತ್ತ ಕೊನೆಗೆ ಆ ಬದುಕಿನಲ್ಲಿ ರೂಪುಗೊಂಡ ಕನಸುಗಳಿಗೆ ಮದುವೆಯನ್ನು ಅನಿವಾರ್ಯವಾಗಿಸುತ್ತಾರೆ. 'ಮದುವೆ', 'ಕುಟುಂಬ' ಎಂಬ ಸಾಂಪ್ರದಾಯಿಕ ಮೌಲ್ಯಗಳೇ ಸಾರ್ವಕಾಲಿಕ ಸತ್ಯಗಳೆಂದು ಸ್ಪಷ್ಟಪಡಿಸುವ ಸಲುವಾಗಿ ಯಾವ ಪಾತ್ರವನ್ನೂ ಗಟ್ಟಿಗೊಳಿಸುವ ಗೋಜಿಗೆ ಹೋಗಿಲ್ಲ ನಿರ್ದೇಶಕರು. ಬದಲು ಇಂತಹ ಮೌಲ್ಯಗಳನ್ನು ಸ್ಥಾಪಿಸಲು ಹೆಣ್ಣು ಎಂತಹ ತ್ಯಾಗ ಮಾಡಲೂ ಸಿದ್ಧ, ಅದು ಅವಶ್ಯ ಕೂಡ ಅನ್ನಿಸುವಂತೆ ಕಾಣಿಸುತ್ತಾರೆ.

ಗೆಳತಿಯ ಬದುಕನ್ನು ಹದಗೊಳಿಸಲು ಸೆರಗು ಹಾಸುವ ಹುಡುಗಿ, ಆ ಮೂಲಕ ತಾನು "ಮದುವೆ, ಕುಟುಂಬ ಎನ್ನುವ ವ್ಯವಸ್ಥೆಯನ್ನು ಕಾಪಾಡಿದೆ" ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ತ್ಯಾಗಮಯಿಯಾಗುತ್ತಾಳೆ. ಜೊತೆಗೆ ಅದೇ ಕಾರಣಕ್ಕಾಗಿ ತನ್ನನ್ನು ಪ್ರೀತಿಸಿದವನನ್ನು ತಿರಸ್ಕರಿಸಿ ಆತ ತನ್ನ ಅಕ್ಕನನ್ನು ಮದುವೆಯಾಗಬೇಕೆಂದು ಕೇಳುವ ಮೂಲಕ ಮತ್ತೊಮ್ಮೆ ನಿಸ್ವಾರ್ಥ ತ್ಯಾಗ ಮಾಡುತ್ತಾಳೆ. ಆದರೆ ಅಕ್ಕ ಒಂದು ಮಗುವಿನ ಪ್ರೀತಿಯ ಹಂಬಲವನ್ನು ಈಡೇರಿಸಲು ಆ ಮಗುವಿನ ತಂದೆಯ ಕೈ ಹಿಡಿಯುವ ತ್ಯಾಗಕ್ಕೆ ಸಿದ್ಧಳಾಗಿರುತ್ತಾಳೆ. ಹೀಗೆ ಚಿತ್ರದುದ್ದಕ್ಕೂ ಹೆಣ್ಣು ವ್ಯವಸ್ಥೆಯನ್ನು ಭದ್ರ ಪಡಿಸುತ್ತಲೇ ಹೋಗುತ್ತಾಳೆ. ಇದರ ಜೊತೆಗೆ ತಾನು ಒಮ್ಮೆ ಆತನಿಗೆ ದೇಹ ಒಪ್ಪಿಸಿರುವುದರಿಂದ ಆತ ಎಂತಹ ಕ್ರೂರಿ,ಕಾಮುಕ ಆಗಿದ್ದರೂ ಆತನನ್ನೇ ಮದುವೆ ಆಗುತ್ತೇನೆಂದು ತೀರ್ಮಾನಿಸಿ ಹುಚ್ಚು ನಿರ್ಧಾರವನ್ನು ತೆಗೆದುಕೊಳ್ಳುವ ಮೂಲಕ ದಿಟ್ಟ ಹುಡುಗಿಯ ದಿಟ್ಟತನವನ್ನು ಮೆರೆಯಿಸಲು ಪ್ರಯತ್ನಪಟ್ಟಿದ್ದಾರೆ. ಆ ಮೂಲಕ ಹೆಣ್ಣಿನ ಪಾವಿತ್ರ್ಯ ಅಥವಾ Purity ಯನ್ನು ಕಾಪಾಡಿದ್ದಾರೆ. ಚಿತ್ರದ ಕೊನೆಯಲ್ಲಿ ರೌಡಿಯನ್ನು ಮದುವೆಯಾದ ಆಕೆ ಹೇಳುತ್ತಾಳೆ– "ಏನೋ ಹಿರೋ ಸರ್, ಮದುವೆ ಆದ ಮೇಲೆ ಇವರ ಮೇಲೆ ಒಂದು ರೀತಿ ಗೌರವ ಬಂದ್ಬಿಟ್ಟಿದೆ"......! 'ಮದುವೆ' ಎನ್ನುವ ಮೌಲ್ಯವೆ ಮನುಷ್ಯ ಸಂಬಂಧಗಳನ್ನು ನಿರ್ಧರಿಸುವ ಸಂಗತಿಯಾಗಿ ಬಿಡುತ್ತದೆ.

ಮಧ್ಯಮ ವರ್ಗದ ಕುಟುಂಬದಲ್ಲಿ ಹೆಣ್ಣು ಮಕ್ಕಳಿಗೆ ಮದುವೆ ಮಾಡುವುದು ಇಂದಿನ ಪರಿಸ್ಥಿತಿಯಲ್ಲಿ ತುಂಬ ಪ್ರಯಾಸದ. ಅನೇಕ ಅವಮಾನಗಳನ್ನು ಎದುರಿಸುವ ಯಾತನೆಯ ಸಂಗತಿ ನಿಜವಿರಬಹುದು. ಆದರೆ ಇದೇ ಕಾರಣಕ್ಕಾಗಿ ಮಧ್ಯಮ ವರ್ಗದ ಹುಡುಗಿಯರೆಲ್ಲ ತ್ಯಾಗಮಯಿಗಳಾಗಿ, ಸತ್ತ ಕನಸುಗಳೊಂದಿಗೆ ಬದುಕುವ ಅನಿವಾರ್ಯತೆಯನ್ನು ಆಯ್ದುಕೊಳ್ಳಬೇಕಾಗಿದೆಯೇ ? ಇಂತಹ ಅನಿವಾರ್ಯತೆ ವ್ಯವಸ್ಥೆಯ ನೀಚ ಕಟ್ಟುಪಾಟುಗಳನ್ನು ಮತ್ತಷ್ಟು ಬಿಗಿಗೊಳಿಸುವುದಲ್ಲದೇ ಹೊಸತನ ಸಾಧ್ಯವೆ ? ಹೀಗೆ ಭ್ರಮೆಗಳನ್ನು ಬೆನ್ನುಹತ್ತಿ ಹತಾಶರಾಗಿ ವ್ಯವಸ್ಥೆಯಲ್ಲಿ ಕರಗುವ ವ್ಯಕ್ತಿತ್ವಗಳೇ ಚಿತ್ರಿತವಾಗುವ ಬದಲು ವಾಸ್ತವತೆಯನ್ನು ತಬ್ಬಿಕೊಂಡು ಹೊಸ ಬದುಕನ್ನು ಚಿಗುರಿಸಿಕೊಳ್ಳಬೇಕೆನ್ನುವ ದಿಟ್ಟತನದ ವ್ಯಕ್ತಿತ್ವ ಹೆಚ್ಚು relevant ಆಗಬಹುದಲ್ಲವೆ? ಅಥವಾ ಮಹಿಳೆ ವ್ಯವಸ್ಥೆಯಲ್ಲಿ ದಿಟ್ಟಳಾಗಿ ನಿಲ್ಲುವುದು ಆಕೆ ತನ್ನ ವ್ಯಕ್ತಿತ್ವವನ್ನು, ಅಸ್ತಿತ್ವವನ್ನು ಪ್ರೀತಿಸುವುದು ಎಲ್ಲೋ ಪುರುಷ ಪ್ರಧಾನ ವ್ಯವಸ್ಥೆಯ ಮೂಲವನ್ನೇ ಪ್ರಶ್ನಿಸಬಹುದಾದ ಆತಂಕ ಭಾದಿಸುವುದರಿಂದ ಆಕೆ ತ್ಯಾಗಮಯಿಯಾಗೇ ಇರಲೆಂಬ ಸ್ವಾರ್ಥ ಧೋರಣೆ, ಇಂತಹ ಚಿತ್ರಗಳ ಒಳಗುಟ್ಟೋ ? ನಯವಾಗಿ ಇಂತಹ ಸ್ವಾರ್ಥ ಧೋರಣೆಗಳನ್ನು ಹೇರುವ ಈ ರೀತಿಯ ಮಧ್ಯಮ ರೀತಿಯ ಚಿತ್ರಗಳೇ ಹೆಚ್ಚು ಅಪಾಯಕಾರಿ ಎನಿಸುತ್ತದೆ. ಈಗಾಗಲೇ ಇಂತಹ ಚಿತ್ರಗಳ ಸರಣಿಯೇ ನಮ್ಮ ಮುಂದಿದೆ. ಇನ್ನಾದರೂ ಹೊಸತನವನ್ನು ತುಂಬಿಕೊಂಡ, ಮಹಿಳೆಯನ್ನು ಪ್ರೀತಿ, ಪ್ರೇಮಗಳ ಜೊತೆ ಸ್ವಾರ್ಥ, ದ್ವೇಷ, ವ್ಯವಹಾರಿಕತೆಗಳನ್ನು ಮೈಗೂಡಿಸಿಕೊಂಡ 'ಮನುಷ್ಯ'ಳನ್ನಾಗಿ ಚಿತ್ರಿಸುವ ಚಿತ್ರಗಳು ನಮ್ಮ ಮಧ್ಯಮ ವರ್ಗಕ್ಕೆ ತಲುಪಿಯಾವೆ ? ●

# ಸುದ್ದಿ ಸಂಕಲನ

## ವಿಶ್ವದ–ಮಹಿಳಾ ವೈದ್ಯ

ವಿಶ್ವದ ಮೊದಲ ಮಹಿಳಾ ವೈದ್ಯೆ ಶಿಕ್ಷಣ ಪಡೆದದ್ದು ಭಾರತದ ಕಾಲೇಜಿನಲ್ಲಿ. ಲಂಡನ್ನಿನ ವೈದ್ಯಕೀಯ ಕಾಲೇಜೊಂದರಲ್ಲಿ ಸಂಪ್ರದಾಯವಾದಿಗಳು ಮೇರಿಷ್ವೆರ್ ಲೀಫ್‌ಗೆ ಪ್ರವೇಶ ನಿರಾಕರಿಸಿದರು: ನಂತರ 1875 ರಲ್ಲಿ ಆಕೆ ಮದ್ರಾಸ್ ವೈದ್ಯಕೀಯ ಕಾಲೇಜಿಗೆ ಸೇರಿದರು. ನಾಲ್ಕುವರ್ಷಗಳ ತರುವಾಯ ವೈದ್ಯಕೀಯ ಪದವೀಧರೆ ಯಾದರು. ದೆಹಲಿಯಲ್ಲಿ ನಡೆದ ವಿಚಾರಗೋಷ್ಠಿಯೊಂದ ರಲ್ಲಿ ಭಾರತೀಯ ವೈದ್ಯಕೀಯ ಸಂಘದ ಅಧ್ಯಕ್ಷ ಡಾ.ವಿ. ಪರಮೇಶ್ವರ ಈ ವಿಷಯ ತಿಳಿಸಿದರು.

## ಅನಾದರ

ಅಭಿವೃದ್ಧಿಶೀಲ ಜಗತ್ತಿನ ಎಲ್ಲ ಸಮಾಜಗಳಲ್ಲಿ ಹೆಣ್ಣು ಮಕ್ಕಳ ಬಗ್ಗೆ ಅನಾದರವಿದೆ ಎಂದು ವಿಶ್ವ ಆರೋಗ್ಯ ಸಂಸ್ಥೆ 'ವರ್ಲ್ಡ್‌ಹೆಲ್ತ್' ಪತ್ರಿಕೆ ತಿಳಿಸಿದೆ.

ಹುಟ್ಟಿದಂದಿನಿಂದಲೇ ಹೆಣ್ಣು ಮಕ್ಕಳನ್ನು ಕಡೆ ಗಣಿಸಲಾಗುತ್ತದೆ. ಗಂಡುಮಕ್ಕಳಿಗೆ ಪ್ರಾಶಸ್ತ್ಯ ನೀಡ ಲಾಗುತ್ತದೆ. ಈ ವಿಚಾರಗಳು ನೆದರ್‌ಲ್ಯಾಂಡಿನಲ್ಲಿರುವ ಅಂತರರಾಷ್ಟ್ರೀಯ ಅಂಕಿ ಅಂಶಗಳ ಸಂಸ್ಥೆ ಪ್ರಕಟಿಸಿದ ವಿಶ್ವ ಸಂತಾನಾಭಿವೃದ್ಧಿ ಸಮೀಕ್ಷೆಯನ್ನಾಧರಿಸಿವೆ ಎಂದು ಪತ್ರಿಕೆ ತಿಳಿಸಿದೆ.

ಬಾಂಗ್ಲಾದೇಶ, ಜೋರ್ಡಾನ್, ನೇಪಾಳ, ಪಾಕಿಸ್ತಾನ, ಸಿರಿಯಾ ಹಾಗೂ ಕೊರಿಯಾಗಳಲ್ಲಿ ಗಂಡು ಮಕ್ಕಳನ್ನು ಹೆಚ್ಚಾಗಿ ಬಯಸುತ್ತಾರೆ. ಜಮೈಕಾ ಮತ್ತು ವೆನಿಜುಯೆಲಾಗಳಲ್ಲಿ ಮಾತ್ರ ಹೆಣ್ಣು ಮಕ್ಕಳ ಬಗ್ಗೆ ಸ್ಪಷ್ಟ ಒಲವಿದೆ ಎಂದು ಈ ಸಮೀಕ್ಷೆ ಹೇಳಿದೆ. ಗಂಡು ಮಗುವಿಗೆ ನೀಡುವ ಆದ್ಯತೆ ಅತಿರೇಕವಾದರೆ, ಹೆಣ್ಣು ಶಿಶುವನ್ನು ತೊರೆದುಬಿಡುವುದು ಅಥವಾ ಹೆಣ್ಣು ಶಿಶು ಹತ್ಯೆಯ ಪ್ರಸಂಗಗಳಿಗೂ ಕಾರಣವಾಗುವ ಸಾಧ್ಯತೆ ಇರುತ್ತದೆ. ಊಟ, ಉಪಚಾರ ಶಿಕ್ಷಣದಲ್ಲೆಲ್ಲಾ ಹೆಣ್ಣು ಮಗುವಿನ ಬಗ್ಗೆ ಭೇದ ತೋರಲಾಗುತ್ತದೆ.

ಗಂಡು ಮಕ್ಕಳಿಗೆ ಹೆಚ್ಚಿನ ಆದ್ಯತೆ ನೀಡಿಕೆಗೆ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆರ್ಥಿಕ ಅಂಶಗಳು ಕಾರಣವೆಂದು ಈ ಅಧ್ಯಯನದಿಂದ ವ್ಯಕ್ತವಾಗಿದೆ.

## ಅಸಭ್ಯಚಿತ್ರಣ ನಿಷೇಧ

ಜಾಹೀರಾತು, ಪ್ರಕಟಣೆ, ಬರಹ ಚಿತ್ರಗಳು ಅಥವಾ ಬೇರಾವುದೇ ರೀತಿಯಲ್ಲಿ ಮಹಿಳೆಯನ್ನು ಅಸಭ್ಯವಾಗಿ ಚಿತ್ರಿಸುವುದನ್ನು ನಿಷೇಧಿಸುವ ಶಾಸನವನ್ನು ರಾಷ್ಟ್ರದಲ್ಲೇ ಪ್ರಥಮ ಬಾರಿಗೆ ರಾಜ್ಯಸಭೆ ನವೆಂಬರ್ 12, 1986ರಂದು ಅಂಗೀಕರಿಸಿತು.

ಮಹಿಳಾ ಮತ್ತು ಶಿಶು ಅಭಿವೃದ್ಧಿ ಖಾತೆ ಸಚಿವೆ ಮಾರ್ಗರೆಟ್ ಆಳ್ವ ಅವರು ರೂಪಿಸಿದ ಮಹಿಳೆಯರ ಅಸಭ್ಯ ಚಿತ್ರಣ (ನಿಷೇಧ) ಮಸೂದೆಗೆ, 1986 ಕ್ಕೆ ಸದನದ ಎಲ್ಲ ವರ್ಗಗಳವರು, ವಿಶೇಷವಾಗಿ ಮಹಿಳಾ ಸದಸ್ಯರು ಪೂರ್ಣ ಬೆಂಬಲ ಸೂಚಿಸಿದರು.

ಮೊದಲ ಬಾರಿ ಶಿಕ್ಷೆ ವಿಧಿಸುವಾಗ 2ವರ್ಷ ಜೈಲು ವಾಸ ಹಾಗೂ 2 ಸಾವಿರ ರೂ. ವರೆಗೆ ದಂಡ, ಎರಡನೆ ಹಾಗೂ ನಂತರದ ಸಲದವುಗಳಿಗೆ ಆರು ತಿಂಗಳಿಂದ 5ವರ್ಷಗಳವರೆಗೆ ಜೈಲುವಾಸ ಹಾಗೂ 5ಸಾವಿರ ರೂ. ಗಳಿಂದ 1ಲಕ್ಷ ರೂ. ಗಳವರೆಗೆ ದಂಡ ವಿಧಿಸುವ ಅವಕಾಶ ಈ ಶಾಸನದಲ್ಲಿದೆ.

## ಶಿಕ್ಷಾರ್ಹ ಅಪರಾಧ

ವರದಕ್ಷಿಣೆ ಅಪರಾಧಕ್ಕೆ ಕನಿಷ್ಟ 5 ವರ್ಷ ಜೈಲು ಮತ್ತು 15 ಸಾವಿರ ರೂಪಾಯಿ ದಂಡ ವಿಧಿಸಲು ಅವಕಾಶ ನೀಡುವ ವರದಕ್ಷಿಣೆ ನಿಷೇಧ ತಿದ್ದುಪಡಿ ಮಸೂದೆಯನ್ನು ರಾಜ್ಯಸಭೆ ಆಗಸ್ಟ್ 22, 1986 ರಂದು ಅಂಗೀಕರಿಸಿದೆ.

ಇದರ ಪ್ರಕಾರ, ವರದಕ್ಷಿಣೆ ಪಡೆದವರಿಗೆ, ಅದಕ್ಕೆ ನೆರವಾದವರಿಗೆ ಕಠಿಣ ಶಿಕ್ಷೆ. ವರದಕ್ಷಿಣೆ ಸಾವಿನ ಹೊಣೆ ಪತಿ ಹಾಗೂ ಅವನ ಕುಟುಂಬದ ಮೇಲೆ ಇರುತ್ತದೆ. ಭಾರತೀಯ ದಂಡ ಸಂಹಿತೆ ಅನ್ವಯ ವರದಕ್ಷಿಣೆ ಸಾವನ್ನು ಶಿಕ್ಷಾರ್ಹ ಅಪರಾಧ ಎಂದು ಪ್ರಥಮ ಬಾರಿಗೆ ಈ ತಿದ್ದುಪಡಿ ಮಸೂದೆ ಮೂಲಕ ಪರಿಗಣಿಸಲಾಗಿದೆ. ಇದಕ್ಕೆ ಅನುಕೂಲವಾಗುವಂತೆ ಅಪರಾಧ ದಂಡಸಂಹಿತೆ ಹಾಗೂ ಭಾರತೀಯ ಸಾಕ್ಷ್ಯ ಕಾನೂನಿನಲ್ಲಿ ಸರಕಾರ ಅಗತ್ಯ ತಿದ್ದುಪಡಿ ಮಾಡುತ್ತಿದೆ.

## ಸಿವಿಲ್ ಸರ್ವೀಸ್

ಸಿವಿಲ್ ಸರ್ವೀಸ್‌ಗೆ ಸೇರುವಂತೆ ಹೆಚ್ಚಿನ ಮಹಿಳೆಯರನ್ನು ಆಕರ್ಷಿಸುವುದಕ್ಕಾಗಿ ಪ್ರಚಾರ ಕಾರ್ಯಗಳನ್ನು ಕೈಗೊಳ್ಳಲು ಸರಕಾರ ನಿರ್ಧರಿಸಿದೆ. ಈಗ ಸಿವಿಲ್ ಸರ್ವೀಸಿನಲ್ಲಿ ಶೇಕಡ 11.7ರಷ್ಟು ಮಾತ್ರ ಮಹಿಳೆಯರಿದ್ದು, ಇನ್ನೂ ಮೂರು ವರ್ಷಗಳಲ್ಲಿ ಈ ಸಂಖ್ಯೆಯನ್ನು ದ್ವಿಗುಣಗೊಳಿಸುವುದು ಸರಕಾರದ ಉದ್ದೇಶ.

## ಕುಟುಂಬ ನ್ಯಾಯಾಲಯ

ರಾಜ್ಯದ ಪ್ರಥಮ ಕುಟುಂಬ ನ್ಯಾಯಾಲಯವನ್ನು ಬೆಂಗಳೂರಿನಲ್ಲಿ ಆರಂಭಿಸಲು ಸರಕಾರ ನಿರ್ಧರಿಸಿದೆ. ಇಬ್ಬರು ನ್ಯಾಯಾಧೀಶರಿರುವ ಈ ನ್ಯಾಯಾಲಯ ಪ್ರಧಾನ ನ್ಯಾಯಾಧೀಶರ ನ್ಯಾಯಾಲಯ ಹಾಗೂ ಅಡಿಷನಲ್ ಪ್ರಧಾನ ನ್ಯಾಯಾಧೀಶರ ನ್ಯಾಯಾಲಯದಲ್ಲಿ ಕಾರ್ಯ ನಿರ್ವಹಿಸಲಿದೆ. 1984ರಲ್ಲಿ ಸಂಸತ್ತಿನಲ್ಲಿ ಅಂಗೀಕೃತವಾದ ಕಾಯಿದೆ ಅನ್ವಯ ರೂಪಿತವಾಗುವ ಈ ನ್ಯಾಯಾಲಯ ಹೈಕೋರ್ಟಿನ ಆಡಳಿತಾತ್ಮಕ ನಿಯಂತ್ರಣಕ್ಕೊಳಪಟ್ಟಿರುತ್ತದೆ. ವಿವಾಹ ಸಂಬಂಧಗಳು ಹಾಗೂ ಇತರ ಕುಟುಂಬಿತ ಸಮಸ್ಯೆಗಳಿಗೆ ಸಂಬಂಧಪಟ್ಟ ಪ್ರಕರಣಗಳು ಮಾತ್ರ ಈ ನ್ಯಾಯಾಲಯದ ವ್ಯಾಪ್ತಿಗೆ ಬರುತ್ತದೆ.

## ಪ್ರತಿಭಟನೆ

ಸ್ಥಳೀಯ ಪತ್ರಿಕೆಯೊಂದರಲ್ಲಿ ಮಹಿಳೆಯರನ್ನು ಅಸಭ್ಯವಾಗಿ ಚಿತ್ರಿಸುವ ಚಿತ್ರ ಪ್ರಕಟವಾದುದನ್ನು ಪ್ರತಿಭಟಿಸಿ ಧಾರವಾಡ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಯರು ಇತ್ತೀಚೆಗೆ ಮೆರವಣಿಗೆ ನಡೆಸಿದರು.

## 'ವರದಕ್ಷಿಣೆ ಸಾವು'

ಕಳೆದ ವರ್ಷ (1986) ತಿಂಗಳಲ್ಲಿ ಜಾರಿಗೊಳಿಸಲಾದ ಭಾರತೀಯ ದಂಡ ಸಂಹಿತೆಯ ಸೆಕ್ಷನ್ 304–ಬಿ ಪ್ರಕಾರ ರಾಜಧಾನಿಯಲ್ಲಿ ಮೊದಲ ಬಾರಿಗೆ ಮೊಕದ್ದಮೆ ಹೂಡಲಾಗಿದೆ ದೆಹಲಿಯ ಶಿವಲಾಲ್ ಹಾಗೂ ಭಗವತ್ (ತಂದೆ, ಮಗ) "ವರದಕ್ಷಿಣೆ ಸಾವಿಗೆ" ಕಾರಣರಾದರೆಂದು ಆರೋಪಿಸಿ ಈ ಮೊಕದ್ದಮೆ ಹೂಡಲಾಗಿದೆ.

ಜನವರಿ 25, 1987ರಂದು ಸೀಲಿಂಗ್ ಫ್ಯಾನ್‌ಗೆ ನೇಣು ಹಾಕಿಕೊಂಡು ಭಗವತ್ ಪತ್ನಿ ಮಹೀಂದ್ರಿ ಆತ್ಮಹತ್ಯೆ ಮಾಡಿಕೊಂಡಳು. 1983ರ ಮೇ ತಿಂಗಳಲ್ಲಿ ಭಗವತ್–ಮಹೀಂದ್ರಿ ವಿವಾಹವಾಗಿತ್ತು, 32 ಸಾವಿರ ರೂ. ವರದಕ್ಷಿಣೆ ಹಾಗೂ ಸ್ಕೂಟರ್ ನೀಡಬೇಕೆಂದು ಮಹೀಂದ್ರಿ ಮನೆಯವರನ್ನು ಒತ್ತಾಯಿಸಲಾಗುತ್ತಿತ್ತು ಎಂದೂ ಆರೋಪಿಸಲಾಗಿದೆ.

304–ಬಿ ಸೆಕ್ಷನ್ ಪ್ರಕಾರ, ವಿವಾಹವಾದ ಏಳು ವರ್ಷಗಳೊಳಗೆ ಮಾಮೂಲಿ ಸಂದರ್ಭಗಳಲ್ಲದೆ ಸುಟ್ಟಗಾಯ ಅಥವಾ ಯಾವುದೇ ದೈಹಿಕ ಹಿಂಸೆಯಿಂದ ಮಹಿಳೆ ಸತ್ತಿದ್ದರೆ ಹಾಗೂ ಸಾವಿಗೆ ಮುಂಚೆ ಆಕೆ ವರದಕ್ಷಿಣೆ ಬೇಡಿಕೆ ಸಂಬಂಧದಲ್ಲಿ ಗಂಡ, ಗಂಡನ ಸಂಬಂಧಿಗಳಿಂದ ಹಿಂಸೆ, ಕಿರುಕುಳಗೊಳಗಾಗಿದ್ದುದನ್ನು ತೋರಿಸಿದಲ್ಲಿ, ಇಂತಹ ಪ್ರಕರಣಗಳನ್ನು "ವರದಕ್ಷಿಣೆ ಸಾವು" ಎಂದು ವರ್ಗೀಕರಿಸಲಾಗುತ್ತದೆ. ಈ ಸೆಕ್ಷನ್ ಪ್ರಕಾರ, ಕನಿಷ್ಠ 7 ವರ್ಷಗಳ ಆಜೀವ ಸೆರೆವಾಸದವರೆಗೆ ಶಿಕ್ಷೆ ನೀಡಲಾಗುತ್ತದೆ.

## ಆಯೋಗ

ಸ್ವಯಂ ಉದ್ಯೋಗಿ ಮಹಿಳೆಯರ ಸಮಸ್ಯೆಗಳ ಪರಿಶೀಲನೆ ಹಾಗೂ ಅಧ್ಯಯನಕ್ಕಾಗಿ ಸಂಸತ್ ಸದಸ್ಯೆ ಇಳಾಭಟ್ ಅಧ್ಯಕ್ಷತೆಯಲ್ಲಿ ಕೇಂದ್ರ ಸರಕಾರ ಆಯೋಗವೊಂದನ್ನು ರಚಿಸಿದೆ.

ಒಂದು ವರ್ಷದೊಳಗೆ ವರದಿ ಸಲ್ಲಿಸಬೇಕೆಂದು ಆಯೋಗಕ್ಕೆ ಸೂಚಿಸಲಾಗಿದೆ. ಸಾಲ, ಮಾರುಕಟ್ಟೆ ಸೌಲಭ್ಯ ಆರೋಗ್ಯ, ಸಾಮಾಜಿಕ ಭದ್ರತೆ ಹಾಗೂ ಇತರ ಸೌಲಭ್ಯಗಳನ್ನು ಪಡೆಯುವಲ್ಲಿ ಈ ಮಹಿಳೆಯರು ಎದುರಿಸಬೇಕಾಗಿರುವ ಕಷ್ಟಗಳ ಬಗ್ಗೆ ಈ ಆಯೋಗ ಅಧ್ಯಯನ ನಡೆಸಲಿದೆ ಎಂದು ಫೆಬ್ರುವರಿ 2. 1987 ರಂದು ಅಧಿಕೃತ ಮೂಲಗಳು ತಿಳಿಸಿವೆ. ಮಹಿಳೆ ಮತ್ತು ಶಿಶು ಅಭಿವೃದ್ಧಿ ಇಲಾಖೆ ರೂಪಿಸಿರುವ ಈ ಆಯೋಗ, ಈ ಮಹಿಳೆಯರಿಗೆ ಹೆರಿಗೆ ಸೌಲಭ್ಯಗಳು ಹಾಗೂ ಆರೋಗ್ಯ ವಿಮೆ ವಿಚಾರದಲ್ಲಿ ವಿವಿಧ ಕಾರ್ಮಿಕ ಕಾನೂನುಗಳಿಂದಾಗಿರುವ ಪರಿಣಾಮಗಳನ್ನು ವಿಶ್ಲೇಷಿಸಲಿದೆ. ಅಲ್ಲದೆ ಉದ್ಯೋಗ, ಆರೋಗ್ಯ ಹಾಗೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ಕ್ಷೇತ್ರದ ಮಹಿಳೆಯರ ಸ್ಥಾನಮಾನವನ್ನು ಪರಿಶೀಲಿಸಲಾಗುವುದು.

ಈ ಆಯೋಗದ ಇತರ ಸದಸ್ಯರು: ಅಮಾತಿ ದೇಸಾಯಿ, ಡಾ, ತಮರಾಜಾಕ್ಷಿ, ಮೃಣಾಲ್ ಪಾಂಡೆ, ಜಯ ಅರುಣಾಚಲಂ ಹಾಗೂ ವೀಣಾ ಮಂಜುದಾರ್.

# ಮಾನವಿ

- ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.
- ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.
- ಮಹಿಳೆಯರೊಂದಿಗೆ ಆತ್ಮೀಯ, ಅರ್ಥಪೂರ್ಣ ಸಂವಾದಕ್ಕಾಗಿ.
- ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನವಿ"
ನಂ. 6555/2--ಎಲ್. ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯ ರಸ್ತೆ.
ಮಾರುತಿ ಸೇವಾನಗರ ಅಂಚೆ
ಬೆಂಗಳೂರು–560 033.

ಸೂಚನೆ : ವಾರ್ಷಿಕ ಚಂದಾ : 15 ರೂ.
ಆಜೀವ ಚಂದಾ : 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಏಳು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್. ಎಂ.ಓ.
ಮೂಲಕ ಸ್ವೀಕರಿಸಲಾಗುವುದು.